

Apr'l 94

# ಮಾನುಷಿ

ತಿಂಗಳ ಪತ್ರಿಕೆ ಏಪ್ರಿಲ್ '94

- ★ ಸಂಕ್ರಮಣದ ಹಾದಿಯಲ್ಲಿ ಗ್ರಾಮೀಣ ಮಹಿಳೆಯ ಉದ್ಯೋಗ
- ★ ಸಾಕ್ಷರತಾ ಆಂದೋಲನ ಮತ್ತು ಮಹಿಳೆ
- ★ ಪಿತೃ ಪ್ರಧಾನತೆ
- ★ ಮನೆ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೯ ಸಂಚಿಕೆ : ೩

ಏಪ್ರಿಲ್ - ೧೯೯೪

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು–560 086

ಸೂಚನೆ : ಬಿಡಿ ಪ್ರತಿ : **3. 00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦೦೬೭



# ಸಂಪಾದಕೀಯ

ನಮ್ಮ ದೇಶದ ಆರ್ಥಿಕ ನೀತಿಯನ್ನು ರೂಪಿಸುವಾಗ ರೈತ ಸಮುದಾಯವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲಾಗುತ್ತಿದೆ. ರೈತರಲ್ಲಿರುವ ಅಸಂಘಟಿತ ಸ್ವರೂಪದ ದುರುಪಯೋಗವೆ ನಿರ್ಲಕ್ಷತೆಗೆ ಮುಖ್ಯ ಕಾರಣವೆನ್ನಬಹುದು. ನಮ್ಮೆದುರಿಗಿರುವ ಗೊಂದಲಮಯ ಆರ್ಥಿಕ ನೀತಿ, ಕುಗ್ಗಿರುವವರನ್ನು ಮತ್ತಷ್ಟು ಕುಗ್ಗಿಸುತ್ತದೆ. ಇಂತಹ ಗೊಂದಲಮಯ ಆರ್ಥಿಕ ನೀತಿ ಯೊಂದಿಗೆ ಗ್ರಾಮೀಣ ಪರಿಸರದಲ್ಲಿನ ಸಂಕೀರ್ಣ ಸಾಮಾಜಿಕ, ರಾಜಕೀಯ ವ್ಯವಸ್ಥೆ, ಸಮಸ್ಯೆಗಳನ್ನು ಮತ್ತಷ್ಟು ಜಟಿಲಗೊಳಿಸುತ್ತವೆ.

ಗ್ರಾಮೀಣ ಜನತೆಗೆ ಸಂಬಂಧಪಟ್ಟ ಆರ್ಥಿಕ ನೀತಿಯನ್ನು ರೂಪಿಸುವಾಗ ಸಮಗ್ರತೆಯ ದೃಷ್ಟಿಕೋನವನ್ನು ಒಳಗೊಳ್ಳಬೇಕಾಗಿರುವುದು ಅತ್ಯಗತ್ಯವಾಗಿದೆ. ಮುಕ್ತ ಆರ್ಥಿಕ ನೀತಿ, ವಾಣಿಜ್ಯ ಬೆಳೆಗಳಿಗೆ ಪ್ರಾಧಾನ್ಯತೆ, ಕೃಷಿ ನೀತಿ, ಮಾರುಕಟ್ಟೆ ವ್ಯವಸ್ಥೆ, ಹೊಸ ತಾಂತ್ರಿಕ ವಿಧಾನಗಳು, ಜೊತೆಗೆ ಡಂಕಲ್ ಪ್ರಸ್ತಾವನೆ ಮುಂತಾದವುಗಳು ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ವಿಘಟಿತ ಗ್ರಾಮ ಸಮುದಾಯಗಳ ಮೇಲೆ ಬೀರುವ ಪರಿಣಾಮಗಳ ಹಿನ್ನೆಲೆಯಲ್ಲಿ ಆರ್ಥಿಕ ನೀತಿಯನ್ನು ರೂಪಿಸುವ ಸಮಗ್ರ 'ಒಳನೋಟ' ಇಂದು ನಮಗೆ ಬೇಕಾಗಿದೆ.

ಸಾಮಾಜಿಕ ಸನ್ನಿವೇಶವನ್ನು ಗಮನಿಸುವಾಗ ವಿಶೇಷವಾಗಿ ಗ್ರಾಮೀಣ ಸ್ತ್ರೀಯರನ್ನು ದೃಷ್ಟಿಯಲ್ಲಿಟ್ಟುಕೊಳ್ಳಬೇಕಾಗುತ್ತದೆ. 'ಕುಟುಂಬ'ದ 'ಯಜಮಾನ' ಪುರುಷ ಎನ್ನುವ ಕಲ್ಪನೆಯೇ ಪ್ರಸ್ತುತ ಆರ್ಥಿಕ ನೀತಿಯ ಹಿಂದಿರುವ ಪ್ರೇರಣೆಯಾಗಿದೆ. ಈ ಕಲ್ಪನೆಯಲ್ಲಿ ಮೂಲಭೂತವಾದ ಬದಲಾವಣೆಯಾಗಬೇಕಾಗಿದೆ. ಆರ್ಥಿಕ ನೀತಿಯನ್ನು ರೂಪಿಸುವಾಗ ಸ್ತ್ರೀಯರನ್ನು ಪ್ರತಿಬಂಧಿಸುವ ಅಂಶಗಳತ್ತ ಆದ್ಯತೆ ನೀಡಬೇಕಾಗುತ್ತದೆ.

ಸ್ತ್ರೀಯರ ಶ್ರಮಕ್ಕೆ ನೇರವಾದ ಬೆಲೆ ಅಥವಾ ಪ್ರತಿಫಲವನ್ನು ಪಡೆಯುವಂತೆ ಮಾಡುವುದು ಗ್ರಾಮೀಣ ಸ್ತ್ರೀಯರನ್ನು ಆರ್ಥಿಕ ಅಭಿವೃದ್ಧಿಯ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವ ಮೊದಲ ಮೆಟ್ಟಿಲು. ಅಗೋಚರವಾದ ಅಪರ ಶ್ರಮವನ್ನು ಗುರುತಿಸಿ, ಉತ್ಪಾದನೆ, ಸಂಪನ್ಮೂಲ ಮಾರುಕಟ್ಟೆ, ವರಮಾನದ ಮೇಲೆ ಸ್ತ್ರೀಯರು ನಿಯಂತ್ರಣವನ್ನು ಹೊಂದುವಂತಹ ಅಂಶಗಳತ್ತ ಹೆಚ್ಚು ಒತ್ತು ನೀಡಬೇಕಾಗಿದೆ.

# ಸಂಕ್ರಮಣ ಹಾದಿಯಲ್ಲಿ ಗ್ರಾಮೀಣ ಮಹಿಳೆಯರ ಉದ್ಯೋಗ

● ಎಚ್. ಎಸ್. ರಾಜೇಶ್ವರಿ

ಭಾರತ ಇಂದು ತುಳಿಯುತ್ತಿರುವ ಆರ್ಥಿಕ ಹಾದಿ ಶ್ರೀಮಂತರನ್ನು ಹೆಚ್ಚು ಹೆಚ್ಚು ಶ್ರೀಮಂತರನ್ನಾಗಿಸುವ, ಬಡವರನ್ನು ಹೆಚ್ಚು ಬಡತನದ ಅಂಚಿಗೆ ತಳ್ಳುವ ಧೋರಣೆಯನ್ನೂ ಹೊಂದಿದೆ. ರಾಷ್ಟ್ರೀಯ ಆರ್ಥಿಕ ನೀತಿಯಲ್ಲಿ ಕೈಗಾರಿಕೆಗಳಿಗೆ ಹೆಚ್ಚಿನ ಒತ್ತು ನೀಡುವುದರ ಜೊತೆಗೆ ಗ್ರಾಮೀಣ ಜನತೆಯತ್ತ ನಿರ್ಲಕ್ಷವನ್ನು ತೋರಿರುವುದು ಕಣ್ಣಿಗೆ ಕಾಣುವ ಸತ್ಯವಾಗಿದೆ. ಗ್ರಾಮೀಣ ಸಮಾಜದ ಸಂಕೀರ್ಣ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ನಮ್ಮ ಪರಿಸರಕ್ಕೆ ಪೂರಕವಾದ, ಹತ್ತಿರವಾದ ವೈಜ್ಞಾನಿಕವಾದ ಆರ್ಥಿಕ ನೀತಿಯ ಕೊರತೆ ಇಂದು ಗ್ರಾಮೀಣ ಜನರನ್ನು ಸಂಕ್ರಮಣ ಸ್ಥಿತಿಯಲ್ಲಿ ನಿಲ್ಲಿಸಿದೆ.

ಆಹಾರ ಪದಾರ್ಥಗಳನ್ನು ಬೆಳೆಯುವುದರ ಬದಲಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯಲೇಬೇಕಾದ ಅನಿವಾರ್ಯತೆ, ಆಹಾರ ಪದಾರ್ಥಗಳಿಗೆ ಸಿಗುವ ಅಗ್ಗದ ಬೆಲೆ, ನಿಶ್ಚಿತ ಮಾರುಕಟ್ಟೆಯಿಲ್ಲದಿರುವುದು, ಆದಾಯದ ಅನಿಶ್ಚಯತೆ, ಸರ್ಕಾರದ ಅಗ್ಗದ ಲೆವಿ ನೀತಿ। ಮಳೆ ಆಧಾರಿತ ವ್ಯವಸಾಯದಲ್ಲಿನ ಗೊಂದಲ ಮುಂತಾದವುಗಳ ಜೊತೆಗೆ, ಮುಕ್ತ ಆರ್ಥಿಕ ನೀತಿಯ ಮುಖವಾಡದಲ್ಲಿ ಬಹುರಾಷ್ಟ್ರೀಯ ಕಂಪನಿಗಳನ್ನು ಆಹ್ವಾನಿಸಿ ದೇಶೀಯ, ಸ್ಥಳೀಯ ಜನತೆಯ ಮೇಲೆ ಹೇರುವುದರ ಜೊತೆಗೆ ಇಲ್ಲಿನ ಶ್ರೀಮಂತ ಸಂಪನ್ಮೂಲಗಳನ್ನು ಲೂಟಿ ಹೊಡೆದು, ಗ್ರಾಮೀಣ ಜನತೆಯನ್ನು ಗುಲಾಮರನ್ನಾಗಿಸುವ ಸಾಮ್ರಾಜ್ಯಶಾಹಿ ನೀತಿಯ ಫಲವೇ ನಮ್ಮ ಎದುರಿಗಿರುವ ಡಂಕಲ್ ಪ್ರಸ್ತಾವನೆ.

ಗ್ರಾಮೀಣ ರೈತರು ಆಹಾರ ಪದಾರ್ಥಗಳಿಗೆ ಪರ್ಯಾಯವಾಗಿ ವಾಣಿಜ್ಯ ಬೆಳಗಳಾದ ಹತ್ತಿ, ಕಬ್ಬು, ರೇಷ್ಮೆ ಮುಂತಾದ ಬೆಳೆಗಳನ್ನು ಬೆಳೆಯಲು ಆದ್ಯತೆಯನ್ನು ನೀಡುತ್ತಿದ್ದಾರೆ. ಆಹಾರ ಪದಾರ್ಥಗಳನ್ನು ಬೆಳೆಯುವುದಕ್ಕಿಂತ ಹೆಚ್ಚಿನ ಲಾಭವನ್ನು ವಾಣಿಜ್ಯ ಬೆಳೆಗಳು ನೀಡುತ್ತಿವೆ. ವ್ಯವಸಾಯವನ್ನೇ ಮೂಲ ಉದ್ಯೋಗವನ್ನಾಗಿಸಿಕೊಂಡ ರೈತರು ಹೆಚ್ಚು ಆದಾಯವನ್ನು ತರುವ ಬೆಳೆಗಳ ಬಗ್ಗೆ ಆಸಕ್ತಿ ತೋರಿಸುವುದು ತೀರಾ ಸಹಜ. ಈ ಬದಲಾವಣೆಯ ಪ್ರತಿಕ್ರಿಯೆಯಲ್ಲಿ ಗ್ರಾಮೀಣ ಮಹಿಳೆಯರ ಸ್ಥಾನ ಮಾನವನ್ನು ಗಮನಿಸುವುದು ಅತ್ಯಗತ್ಯವಾಗಿದೆ.

ಇಂತಹ ಆರ್ಥಿಕ ನೀತಿಯ ಜೊತೆಗೆ ಹಳ್ಳಿಗಳಲ್ಲಿ ಕಂಡು ಬರುವ ಫ್ಯೂಡಲ್ ಮನೋಭಾವನೆ, ಬಲವಾಗಿ ಬೇರೂರಿರುವ ಜಾತಿ ಪದ್ಧತಿ, ಸ್ತ್ರೀಯರ ಬಗೆಗಿರುವ ಮೌಲ್ಯಗಳು, ಪಕ್ಷ ರಾಜಕೀಯದ ಗುಂಪುಗಾರಿಕೆಗಳು ರಾಷ್ಟ್ರದ ಆರ್ಥಿಕ ನೀತಿಯೊಂದಿಗೆ ತಳುಕು ಹಾಕಿಕೊಂಡು ಸಮಸ್ಯೆಗಳನ್ನು ಹೆಚ್ಚು ಸಂಕೀರ್ಣಗೊಳಿಸುತ್ತವೆ.

ರಾಷ್ಟ್ರದ ಆರ್ಥಿಕ ಪ್ರಗತಿಯನ್ನು ದೃಷ್ಟಿಯಲ್ಲಿಟ್ಟುಕೊಂಡಿರುವ ಆರ್ಥಿಕ ನೀತಿಗಳು ಸ್ತ್ರೀಯರ ಉತ್ಪಾದನೆಯ ಕೊಡುಗೆಯನ್ನು ಗುರುತಿಸುವ, ತನ್ನ ವ್ಯಾಪ್ತಿಗೆ ಸೇರಿಸಿಕೊಳ್ಳುವ ಹಂತಕ್ಕೆ ನಮ್ಮ ಸಮಾಜ ಇನ್ನೂ ತಲುಪಿಲ್ಲ. ಹೊಸ ತಾಂತ್ರಿಕ ವಿಧಾನಗಳು, ಮುಕ್ತ ಆರ್ಥಿಕ ನೀತಿ ಹಾಗೂ ರಫ್ತು ಪ್ರಧಾನವಾದ ಆರ್ಥಿಕ ಯೋಜನೆಗಳು ಸ್ತ್ರೀಯರ ಆರ್ಥಿಕ ಜೀವನದ ಮೇಲೆ ತೀವ್ರವಾದ ಪರಿಣಾಮವನ್ನು ಉಂಟು ಮಾಡುತ್ತದೆ. ಅಲ್ಪ ಸ್ವಲ್ಪ ಸ್ವಾವಲಂಬಿಯಾಗಿರುವ ಸ್ತ್ರೀಯರಿಂದ ಉದ್ಯೋಗಗಳನ್ನು ಕಸಿದುಕೊಂಡು, ಬಹುಪಾಲು ಸ್ತ್ರೀಯರು ಉದ್ಯೋಗದಿಂದ ವಂಚಿತರಾಗುತ್ತಾರೆ. ಯಾವುದೋ ಒಂದು ಉದ್ಯೋಗವನ್ನು ನೆಚ್ಚಿ ಬದುಕುತ್ತಿದ್ದ ಸ್ತ್ರೀಯರು ಈ ಬದಲಾವಣೆಗಳ ಪರಿಣಾಮವಾಗಿ, ಭೂಮಿಯನ್ನು ಕಳೆದುಕೊಂಡು ಕೃಷಿ ಕಾರ್ಮಿಕರಾಗುವ ಮಟ್ಟಕ್ಕೆ ಅವರನ್ನು ತಳ್ಳುತ್ತಿದೆ.

ಆದೇ ರಾಷ್ಟ್ರೀಯ ಯೋಜನೆಯಲ್ಲಿ ಸ್ತ್ರೀಯರಿಗೆ ಹೆಚ್ಚಿನ ಉದ್ಯೋಗದ ಅವಕಾಶವನ್ನು ಒದಗಿಸಿಕೊಡುವ ಉದ್ದೇಶವನ್ನು ಹೊಂದಿರುವುದರ ಮೂಲಕ ಸ್ತ್ರೀಯರ ಸ್ಥಾನಮಾನದಲ್ಲಿ ಹೆಚ್ಚಿನ ಬದಲಾವಣೆಯನ್ನು ತರುವ ಉದ್ದೇಶವನ್ನು ಹೊಂದಿತ್ತು. ಆದರೆ ಈ ಯೋಜನೆಗಳು ಗ್ರಾಮೀಣ ಮಹಿಳೆಯರು ಬದುಕುತ್ತಿರುವ ಸ್ಥಿತಿಗತಿ

ಗಳನ್ನು ನಿರ್ಣಯಿಸುವ ಅಂಶಗಳನ್ನು ಗಮನಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಕೃಷಿ ವ್ಯವಸಾಯ, ರೇಷ್ಮೆ, ಹೈನುಗಾರಿಕೆಯಲ್ಲಿ ತೊಡಗಿದ ಗ್ರಾಮೀಣ ಮಹಿಳೆಯರ ಬವಣೆಯನ್ನು ಗುರುತಿಸುವುದು ಅತ್ಯಗತ್ಯವಾಗಿದೆ.

ಗ್ರಾಮಗಳಲ್ಲಿ ಈ ಮೂರು ವೃತ್ತಿಗಳಲ್ಲಿ ತೊಡಗಿದ ಮಹಿಳೆಯರ ಆರ್ಥಿಕ ಜೀವನದಲ್ಲಿ ಕೆಲವು ಸಾಧ್ಯತೆಗಳನ್ನು ಗುರುತಿಸಬಹುದು. ಆಹಾರ ಬೆಳೆಗಳಿಂದ ವಾಣಿಜ್ಯ ಬೆಳೆಗಳಿಗೆ ವ್ಯವಸಾಯದಲ್ಲಿ ಬದಲಾವಣೆಯಾಗುವ ಸಂಕ್ರಮಣ ಸ್ಥಿತಿಯಲ್ಲಿ, ಸ್ತ್ರೀಯರ ಶ್ರಮವನ್ನು ಹೆಚ್ಚು ಅಗೋಚರಗೊಳಿಸಿ, ಅವರ ಶ್ರಮವನ್ನು ಸಂಪೂರ್ಣವಾಗಿ ಹಿನ್ನೆಲೆಗೆ ತಳ್ಳುತ್ತದೆ. ಈ ವ್ಯಕ್ತಿಗಳಿಗೆ ಬೇಕಾದ ಶ್ರಮವನ್ನು ಹೆಂಗಸರು ಕುಟುಂಬದ ಚೌಕಟ್ಟಿನಲ್ಲಿ, ಮನೆಗೆಲಸದ ವ್ಯಾಪ್ತಿಯಲ್ಲಿಯೇ ಪೂರೈಸುವುದರಿಂದ, ಈ ಶ್ರಮವನ್ನು ನಿರ್ಧಿಷ್ಟವಾಗಿ ಬೇರ್ಪಡಿಸಲು ಸಾಧ್ಯವಾಗುವುದಿಲ್ಲ. ಸ್ತ್ರೀಯರು ಹೆಚ್ಚು ಹೆಚ್ಚು ಪುರುಷರನ್ನು ಅವಲಂಬಿಸುವುದು ಅನಿವಾರ್ಯವಾಗುತ್ತದೆ. ಸ್ವಾವಲಂಬನೆಯನ್ನು ಕಳೆದು ಕೊಳ್ಳುವ ಸ್ತ್ರೀಯರು ತಾವು ಉತ್ಪಾದಿಸುವ ವಸ್ತುಗಳಿಗೆ ಪರಕೀಯರುಗುತ್ತಾರೆ. ಮಾರಾಟ ವ್ಯವಸ್ಥೆ ಕುಟುಂಬದಿಂದ, ಗ್ರಾಮದ ವ್ಯಾಪ್ತಿಯಿಂದ ಹೊರಗಡೆ ನಡೆಯುವುದರಿಂದ, ಸ್ತ್ರೀಯರು ಸಹಜವಾಗಿ, ಇತರ ಸಾಮಾಜಿಕ ಕಾರಣಗಳಿಂದ ದೂರ ಉಳಿಯುತ್ತಾರೆ.

## ಹೈನುಗಾರಿಕೆ

ಪರಂಪರಾಗತವಾಗಿ ಪಶುಸಂಗೋಪನೆಯನ್ನು ಮಹಿಳೆಯರೇ ಮಾಡಿಕೊಂಡು ಬಂದಿದ್ದಾರೆ. ಪಶುಸಂಗೋಪನೆ ಕೃಷಿಗೆ ಪೂರಕವಾಗಿ ಉಪ ಕಸುಬಾಗಿದ್ದುದರಿಂದ, ಕೃಷಿಗೆ ಬೇಕಾದ ಜೈವಿಕ ಗೊಬ್ಬರದ ಉತ್ಪಾದನೆಗೆ, ವ್ಯವಸಾಯಕ್ಕೆ ಬೇಕಾದ ರಾಸುಗಳನ್ನು ಪಡೆಯುವುದು ಮುಖ್ಯ ಉದ್ದೇಶವಾಗಿತ್ತು. ಇದರ ಜೊತೆಗೆ ಮನೆ ಮಂದಿಗೆಲ್ಲಾ ಹಾಲು, ಮೊಸರು, ಬೆಣ್ಣೆ ಯಥೇಚ್ಛವಾಗಿ ದೊರೆಯುತ್ತಿತ್ತು. ಅಧಿಕವಾಗಿ ಉತ್ಪಾದಿಸುತ್ತಿದ್ದ ಹಾಲನ್ನು ಮಧ್ಯವರ್ತಿಗಳಿಗೆ ಮಾರಾಟ ಮಾಡುವುದು ವಾಡಿಕೆಯಾಗಿತ್ತು.

ಈ ಮಧ್ಯವರ್ತಿಗಳು ರೈತರಿಂದ ಕೊಂಡ ಹಾಲನ್ನು ಹೆಚ್ಚಿನ ಬೆಲೆಗೆ ಮಾರಾಟ ಮಾಡಿ ತಾವು ಹೆಚ್ಚು ಲಾಭ ಗಳಿಸುವುದರ ಮೂಲಕ ರೈತರನ್ನು ನಾನಾ ರೀತಿಯ ಶೋಷಣೆಗೆ ಗುರಿ ಮಾಡತೊಡಗಿದರು. ಈ ಮಧ್ಯವರ್ತಿಗಳ ಶೋಷಣೆಯಿಂದ ರೈತರನ್ನೂ ಬಿಡುಗಡೆ ಮಾಡುವುದರ ಜೊತೆಗೆ ಹೈನುಗಾರಿಕೆಯನ್ನು ಒಂದು ಸ್ವತಂತ್ರ ಸ್ವರೂಪದ ಉದ್ಯೋಗವನ್ನಾಗಿಸುವುದರ ಮೂಲಕ ರೈತರಿಗೆ ನಿರಂತರ ಆದಾಯವನ್ನು ತರುವ ವೃತ್ತಿಯನ್ನಾಗಿಸುವ ಪ್ರಯತ್ನವನ್ನು ಹಾಲು ಉತ್ಪಾದಕ ಸಹಕಾರಿ ಸಂಘಗಳನ್ನು ಗ್ರಾಮಗಳಲ್ಲಿ ಮಾಡಲಾಗುತ್ತಿದೆ. ರೈತರು ಉತ್ಪಾದಿಸಿದ ವಸ್ತುವಿನ ಮೇಲೆ, ರೈತರೇ ಸಂಪೂರ್ಣ ನಿಯಂತ್ರಣ ಹೊಂದಿ ಅದರ ಮಾರುಕಟ್ಟೆಯ ವ್ಯವಸ್ಥೆಯನ್ನ ಈ ಸಹಕಾರಿ ಸಂಘಗಳ ಮೂಲಕ ರೈತರೇ ಮಾಡುವುದರ ಮೂಲಕ ಕ್ಷೀರ ಕ್ರಾಂತಿಗೆ ಮೊದಲಾದರು.

ಈ ಕ್ಷೀರ ಕ್ರಾಂತಿ ರೈತರ ಹಲವಾರು ಆರ್ಥಿಕ, ಸಾಮಾಜಿಕ, ಬದಲಾವಣೆಗೆ ಅಡಿಗಲ್ಲಾಗುವುದರಲ್ಲಿ ಯಶಸ್ವಿಯಾದರೂ ಮಹಿಳೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದೆಯೆಂದೇ ಹೇಳಬಹುದು. ಮಧ್ಯವರ್ತಿಗಳಿಗೆ ಹಾಲು ಹಾಕುತ್ತಿದ್ದಂತಹ ಸಂದರ್ಭದಲ್ಲಿ ಮಹಿಳೆಯರು ನೇರವಾಗಿ ಅದರೊಂದಿಗೆ ವ್ಯವಹರಿಸುತ್ತಿದ್ದರು. ಇದರಿಂದ ಅವರು ಶೋಷಣೆಗೆ ಒಳಗಾಗುತ್ತಿದ್ದುದು ನಿಜವಾದರೂ ಹೈನುಗಾರಿಕೆಗೆ ಸಹಕಾರಿ ಸಂಘಗಳ ಮೂಲಕ ಒಂದು ಸಾಮಾಜಿಕ, ಆರ್ಥಿಕ, ರಾಜಕೀಯ ಸ್ವರೂಪವನ್ನು ನೀಡಿದಾಗ, ಈ ವ್ಯವಸ್ಥೆಯಲ್ಲಿ ಪುರುಷರು ಮಾತ್ರ ನಿರ್ಣಾಯಕ ಪಾತ್ರ ವಹಿಸುವಂತಾಯಿತು. ಸ್ತ್ರೀಯರನ್ನು ಸಂಪೂರ್ಣವಾಗಿ ಮೂಲೆಗೊತ್ತಲಾಯಿತು. ಹೈನುಗಾರಿಕೆಯ ಕೆಲಸವನ್ನು ಹಸು ಎಮ್ಮೆಗಳನ್ನು ಮೇಯಿಸುವ, ಹುಲ್ಲುತರುವ, ಮೈತೊಳೆಯುವ, ಕೊಟ್ಟಿಗೆ ಶುಚಿಮಾಡುವ, ಹಾಲು ಕರೆಯುವ, ತಿಂಡಿ ಹಾಕುವ ಮುಂತಾದ ಕೆಲಸಗಳನ್ನೂ ಸ್ತ್ರೀಯರೇ ಮಾಡುತ್ತಾರೆ. ಒಬ್ಬ ಮಹಿಳೆಗೆ, ಮನೆಯಲ್ಲಿಯೇ ಒಂದು ಹಸು ಅಥವಾ ಎಮ್ಮೆಯನ್ನು ನೋಡಿಕೊಳ್ಳಲು (ಹೊರಗೆ ಹೋಗಿ ಮೇಯಿಸಿಕೊಂಡು ಬರುವುದನ್ನೂ ಬಿಟ್ಟು) ಮೂರು ಗಂಟೆಗಳು ಬೇಕಾಗುತ್ತದೆಯೆಂದು ಅಂದಾಜು ಮಾಡಲಾಗಿದೆ. ಹೊರಗೆ ಹೋಗಿ ಮೇಯಿಸಿಕೊಂಡು ಬರುವುದು. ಅದರ ಮೈತೊಳೆಯುವುದು ಮುಂತಾದ ಕೆಲಸಗಳಿಗೆ 4 ಗಂಟೆಗಳನ್ನು ವ್ಯಯಿಸುತ್ತಾಳೆ.

ಸರಾಸರಿ 300 ಲೀಟರ್‌ನಿಂದ 400 ಲೀಟರ್ ಹಾಲು

ಸಂಗ್ರಹಿಸುವ ಒಂದು ಸಣ್ಣ ಗ್ರಾಮದಲ್ಲಿ ಒಂದು ತಿಂಗಳಲ್ಲಿ ಸುಮಾರು 1 ಲಕ್ಷ ರೂ. ಹಣದ ವಹಿವಾಟು ನಡೆಯುವುದರ ಜೊತೆಗೆ, ಉತ್ಪಾದಕರು, ಪುರುಷರು ಬಟವಾಡೆಯ ಹಣವನ್ನು ಪಡೆಯುತ್ತಾರೆ. ಸ್ತ್ರೀಯೊಬ್ಬಳು ಮನೆಯಲ್ಲಿ ತನ್ನ ಶ್ರಮದ ಆಧಾರದಿಂದ ಉತ್ಪಾದಿಸುವ ವಸ್ತುವಿಗೂ, ಅದರಿಂದ ಬರುವ ಆದಾಯಕ್ಕೂ ಪರಕೀಯಳಾಗಿರುವುದರ ಜೊತೆಗೆ, ಒಂದು ಗ್ರಾಮದ ಸ್ತ್ರೀ ಸಮುದಾಯ ಉತ್ಪಾದಿಸುವ 1 ಲಕ್ಷ ರೂ.ಗಳ ಆದಾಯಕ್ಕೆ ಪರಕೀಯರಾಗುತ್ತಾರೆ. ಇದು ಕೇವಲ ಗ್ರಾಮಮಟ್ಟದ ಅಂದಾಜು ಮಾತ್ರ. ಜಿಲ್ಲಾಮಟ್ಟದ ರಾಜ್ಯ ಮಟ್ಟದ, ರಾಷ್ಟ್ರೀಯ ಹಂತದವರೆಗೂ ನಡೆಯುವ ಕೋಟ್ಯಾಂತರ ರೂ.ಗಳ ವ್ಯವಹಾರದಲ್ಲಿ ಸ್ತ್ರೀಯರ ಶ್ರಮ ಸಂಪೂರ್ಣ ಅಗೋಚರವಾಗಿದೆ.

ಸಹಕಾರ ಸಂಘಗಳಲ್ಲಿ ಮಹಿಳಾ ಷೇರುದಾರರ ಸಂಖ್ಯೆ ತೀರಾ ಕಡಿಮೆ. ಹಾಲು ಉತ್ಪಾದಕ ಸಹಕಾರ ಸಂಘಗಳನ್ನು ಪ್ರಾರಂಭಿಸುವಾಗ, ಪುರುಷರನ್ನು 'ಸಹಜ'ವಾಗಿ ಮನೆಯ ಯಜಮಾನರೆಂದು ಪರಿಗಣಿಸಿ, ಅವರ ಹೆಸರಿನಲ್ಲಿ ಶೇರು ಕಟ್ಟಿಸಿಕೊಳ್ಳಲಾಗುತ್ತದೆ. ಮಹಿಳಾ ಶೇರುದಾರರಿದ್ದರೂ, ವಿಧವೆಯರು ಅಥವಾ ಗಂಡಸರ ಹೆಸರಿನಲ್ಲಿ ಶೇರು ಕಟ್ಟಲು ಸಾಧ್ಯವಿಲ್ಲದಾಗ ಹೆಂಗಸರ ಹೆಸರಿನಲ್ಲಿ ಇರುವುದು ಕಂಡುಬರುತ್ತದೆ. ಇದುವರೆಗೂ ನಮ್ಮನ್ನು ಶೇರು ಕಟ್ಟುವಂತೆ ಯಾರೂ ಕೇಳಲಿಲ್ಲ ಎಂಬುದು ಎಲ್ಲಾ ಹೆಂಗಸರ ಸಾಮಾನ್ಯ ದೂರು. ಹಸು, ಎಮ್ಮೆಗಳನ್ನು ನೋಡಿಕೊಂಡು ಹಾಲು ಉತ್ಪಾದಿಸಿ, ಮಕ್ಕಳ ಅಥವಾ ಮನೆಯ ಗಂಡಸರ ಕೈಯಲ್ಲಿ ಸಹಕಾರಿ ಸಂಘಗಳಿಗೆ ಕಳಿಸಿಕೊಡುವ ಪರಿಪಾಟ ಇಂದು ಎಲ್ಲಾ ಹಳ್ಳಿಗಳಲ್ಲೂ ಕಂಡು ಬರುತ್ತದೆ. ಸಂಘದ ದೈನಂದಿನ ವ್ಯವಹಾರದ ಬಗ್ಗೆಯಾಗಲೀ, ಸಿಗುವ ಸೌಲಭ್ಯಗಳ ಬಗ್ಗೆ ಯಾಗಲೀ ಸ್ತ್ರೀಯರಿಗೆ ಸಮರ್ಪಕವಾದ ಮಾಹಿತಿ ಇಲ್ಲದ ಕಾರಣ ಸ್ತ್ರೀಯರು ಸಂಪೂರ್ಣ ಅಜ್ಞಾನಿಗಳಾಗಿದ್ದಾರೆ.

ಹಾಲಿನ ಬಟವಾಡೆಯನ್ನು ತೆಗೆದುಕೊಳ್ಳುವವರು ಪುರುಷರೇ. ಪ್ರಾರಂಭದಿಂದಲೂ ಪುರುಷರೇ ಸಂಪೂರ್ಣವಾಗಿ ನಿರ್ವಹಿಸುತ್ತಿರುವ ವ್ಯವಹಾರವನ್ನು ಪುರುಷರು ಸುಲಭವಾಗಿ ಮಹಿಳೆಯರಿಗೆ ಬಿಟ್ಟುಕೊಡಲು ತಯಾರಿರುವುದಿಲ್ಲ. 65 ವರ್ಷ ವಯಸ್ಸಿನ ಮಹದೇವಮ್ಮ "ಗಂಡಸರ ಕೈಗೆ ಹಾಲಿನ ದುಡ್ಡು ಕೊಟ್ಟರೆ, 2 ಪ್ಯಾಕೆಟ್ ತೆಗೆದುಕೊಂಡು ಹಟ್ಟಿಗೆ ಹೋಗ್ತಾರೆ. ಅದಕ್ಕೆ ಹೆಂಗಸರ ಕೈಗೆ ಹಾಲಿನ ದುಡ್ಡು ಸಿಗುವಂತಾಗಬೇಕು ಎನ್ನುತ್ತಾಳೆ. ನಾವೇನಾದ್ರು ಹಾಲಿನ ದುಡ್ಡು ಕೇಳಿದರೆ, ಗಂಡಸರು ಬಿಡ್ತಾರಾ, ಹಾಗಿದ್ರೆ ನೀನೇ ಎಲ್ಲಾ ಮನೆ ವ್ಯವಹಾರ ಮಾಡಿ, ನಿಮ್ಮ ಅಪ್ಪನ ಮನೆಯಿಂದ ಬಂಡವಾಳ ತಂದು ಹಾಕಿ ಹಸು ತೆಗೆದುಕೊಂಡು ಬಾ ಎನ್ನುತ್ತಾರೆ. ಸಿದ್ಧಗಂಗಮ್ಮ ನುಡಿಯುತ್ತಾಳೆ. ಚನ್ನಪಟ್ಟಣದ ಕೋಟಿಮಾರನ ಹಳ್ಳಿಯಲ್ಲಿ ಮಹಿಳಾ ಹಾಲು ಉತ್ಪಾದಕ ಸಹಕಾರ ಸಂಘವನ್ನು ಪ್ರಾರಂಭಿಸಿದ ದಿನದಿಂದಲೂ ಪ್ರತಿರೋಧವನ್ನು ಎದುರಿಸುತ್ತಲೇ ಬಂದಿದ್ದಾರೆ. ಗಂಡಸರು ನಾವು ಬಂಡವಾಳ ಹಾಕುವುದು, ಆದರೆ ಹೆಂಗಸರಿಗೆ ಹೇಗೆ ಹಣ ಕೊಡುತ್ತೀರೆಂದು ಕಾರ್ಯದರ್ಶಿ ಅಲಮೇಲಮ್ಮ ಅವರ ಮೇಲೆ ರೋಫ ಹಾಕಿದ ಪ್ರಸಂಗಗಳೂ ಇವೆ. ಆದರೆ ಕ್ರಮೇಣ ಪುರುಷರೂ ಮಹಿಳೆಯರು ನಿರ್ವಹಿಸುವ ಹಾಲಿನ ಸಂಘವನ್ನು ಒಪ್ಪಿಕೊಂಡಿರುವುದು ಒಂದು ಸಂತೋಷದ ಸಂಗತಿ.

ಮಾಗಡಿ ತಾಲ್ಲೂಕು ಮರೂರಿನ ಮುನಿಯಮ್ಮ ಹೈನುಗಾರಿಕೆಯ ಶ್ರಮವಿಭಜನೆ ಹೇಗೆ ಲಿಂಗಾಧಾರಿತವಾಗಿದೆ ಅದರ ಅರಿವು ಆಕೆಗಿದೆಯೆನ್ನುವುದು ಆಕೆಯ ಮಾತಿನಲ್ಲೇ ವ್ಯಕ್ತವಾಗುತ್ತದೆ. "ನಾವು ಮನೆಯಲ್ಲಿ ಚೆನ್ನಾಗಿಯೇ ಕೆಲಸವನ್ನು ಹಂಚಿಕೊಂಡಿದ್ದೇವೆ. ಎಮ್ಮೆ ಮೇಯಿಸುವುದು ಹುಲ್ಲು, ಮೇವು, ಸೊಪ್ಪು ಸೆರೆ ಎಲ್ಲಾ ತರುವುದು ನಾವು ಹೆಂಗಸರು. ಆದರೆ ದುಡ್ಡು ತೆಗೆದುಕೊಳ್ಳುವುದು ಮಾತ್ರ ಗಂಡಸರು" ಎಂದು ವ್ಯಂಗವಾಗಿ ನುಡಿಯುತ್ತಾಳೆ. ಗ್ರಾಮೀಣ ಕುಟುಂಬಗಳಿಗೆ ಒಂದು ನಿರಂತರ ಆರ್ಥಿಕ ಆದಾಯ ವ್ಯವಸ್ಥೆಯನ್ನು ಹಾಲು ಉತ್ಪಾದಕ ಸಹಕಾರ ಸಂಘಗಳು ಒದಗಿಸಿದ್ದು, ಇದು ಸ್ತ್ರೀಯರ ಶ್ರಮದ ಮೇಲೆ ಅವಲಂಬಿತವಾಗಿದೆ. ಮದರ್ ಸಾಬರ ದೊಡ್ಡಿಯಲ್ಲಿನ ಜಯಮ್ಮ "ಏನೋ ಹೆಂಗಸರು ಅಷ್ಟು ಇಷ್ಟು ಕೆಲಸ ಮಾಡಿ ಹಾಲು ತಂದು ಹಾಕುವುದರಿಂದ ಡೈರಿ ನಡೆಯುತ್ತಿದೆ. ಗಂಡಸರನ್ನು ನಂಬಿದ್ದರೆ ಈ ಡೈರಿಯೇ ಇರುತ್ತಿರಲಿಲ್ಲ"ವೆನ್ನುವುದು ಸಂಪೂರ್ಣ ಸತ್ಯ.

ಹೈನುಗಾರಿಕೆಯಲ್ಲಿ ತೊಡಗಿದ ಗ್ರಾಮೀಣ ಮಹಿಳೆಯರು ಹೀಗೆ ಮೂಲೆ ಗುಂಪಾಗಲು ಒಂದೆಡೆ ಸಾಂಸ್ಕೃತಿಕ ಮೌಲ್ಯಗಳು, ಕುಟುಂಬದ ಹೊರೆ, ಇನ್ನಿತರ ಕಾರಣಗಳ ಜೊತೆಗೆ ಆಧುನಿಕ ತಂತ್ರಜ್ಞಾನಗಳು, ಒಡ್ಡುವ ಸವಾಲು

ಗಳು ಸಂಕೀರ್ಣವಾದವು. ಶತಮಾನಗಳಿಂದ ತೆರೆದು ಕೊಳ್ಳದ ಮನಸ್ಸು 'ವ್ಯವಹಾರ ಜ್ಞಾನ' ಬಾಗಿಲನ್ನು ತುಳಿಯಲು ಹಿಂಜರಿಯುತ್ತದೆ. ಈ ವ್ಯವಹಾರ ಜ್ಞಾನದ ಕೊರತೆ ಸಹಜವಾಗಿ ಕೀಳರಿಮೆಯನ್ನು ಹುಟ್ಟುಹಾಕಿ ಅವರನ್ನು ಕುಗ್ಗಿಸಿ ಬಿಡುತ್ತವೆ. ವ್ಯವಹಾರಕ್ಕೆ ಸಂಬಂಧ ಪಟ್ಟ ಮಾಹಿತಿಯ ಕೊರತೆ, ಅನಕ್ಷರಸ್ಥ ಮಹಿಳೆಯನ್ನು ಹಿಂದೂಡುತ್ತವೆ. ಯಜಮಾನರ ಹೆಸರಿನಲ್ಲಿ ಹಾಲು ಹಾಕುತ್ತಿದ್ದ ಮಾಗಡಿ ತಾಲ್ಲೂಕಿನ ಕುದೂರಿನ ಕೆಂಪಮ್ಮ ಯಜಮಾನರು ಕಾಯಿಲೆ ಹಿಡಿದು ಮಲಗಿದ ಸಂದರ್ಭ ದಲ್ಲಿ ತಾನೇ ಹಾಲಿನ ದುಡ್ಡು ತೆಗೆದುಕೊಳ್ಳಲು ಮೊದಲ ಬಾರಿ ಹೋದಾಗಿನ ಅನುಭವವನ್ನು ತಣ್ಣಗಿನ ದನಿಯಲ್ಲಿ ಹೇಳುತ್ತಾಳೆ. ಹಣವನ್ನು ತೆಗೆದುಕೊಳ್ಳುವಾಗ ರೆವಿನ್ಯೂ ಸ್ಟ್ಯಾಂಪ್ ಹಚ್ಚಿ ಸಹಿ ಮಾಡಬೇಕೆಂದು ಅವಳಿಗೆ ಅದು ವರೆಗೂ ತಿಳಿದಿರಲಿಲ್ಲ. ರೆವಿನ್ಯೂಸ್ಟ್ಯಾಂಪ್ ಹೆಸರನ್ನು ಆಕೆ ಕೇಳಿರಲೂ ಇಲ್ಲ. ಕಾರ್ಯದರ್ಶಿ ರೆವಿನ್ಯೂ ಸ್ಟ್ಯಾಂಪನ್ನು ತರಲು ಹೇಳಿದಾಗ ಆಕೆಗೆ ಅದು ಅರ್ಥ ವಾಗದೇ ಪುನಃ ಕೇಳಲೂ ಆಗದೆ, ಕಾಲೆಲ್ಲಾ ನಡುಗ ತೊಡಗಿದವು. ಎದ್ದು ಹೋಗಲು ಆಗದೇ ಸುಮ್ಮನೇ ಕುಳಿತುಕೊಳ್ಳಲು ಆಗದೇ ಗೊಂದಲದಲ್ಲಿದ್ದಾಗ ಗದರಿದ ಕಾರ್ಯದರ್ಶಿಯ ಬಳಿ ತನ್ನ 'ಅಜ್ಞಾನದ' ಅಸಹಾಯಕತೆ ಯನ್ನು ಹಂಚಿಕೊಳ್ಳಬೇಕಾಯಿತು. ಈಗ ತಾನು ಹಾಲಿನ ಹಣವನ್ನು ತೆಗೆದುಕೊಳ್ಳುತ್ತಿರುವುದನ್ನು ಹೇಳಿಕೊಳ್ಳು ವಾಗ ಬೀಗಿದರೂ "ನನಗೇನೊ ಅನಿವಾರ್ಯವಿತ್ತು ಹೋದೆ, ಆದರೆ ಬೇರೆ ಸಂದರ್ಭದಲ್ಲಿ ಇಂತಹ ಕಹಿ ಅನುಭವ ಆಗಿದ್ದರೆ ನಾನು ಖಂಡಿತಾ ಪುನಃ ಹೋಗುತ್ತಿರಲಿಲ್ಲ, ವೆಂದು ಕೆಂಪಮ್ಮ ಒಪ್ಪಿಕೊಳ್ಳುತ್ತಾಳೆ. ಇಂತಹ ಸವಾಲು ಗಳನ್ನು ಹೈನುಗಾರಿಕೆಯಲ್ಲಿ ತೊಡಗಿದ ಮಹಿಳೆ ಪ್ರತಿ ಹೆಜ್ಜೆಯಲ್ಲಿ ಎದುರಿಸುವುದನ್ನು ನಾವು ಕಾಣಬಹುದು.

ಹಾಲು ಉತ್ಪಾದಕ ಸಹಕಾರ ಸಂಘಗಳ ಜೊತೆಗೆ ವ್ಯವಹರಿಸಬೇಕಾದ ವ್ಯವಹಾರದ ಮಾಹಿತಿ ಇದುವರೆಗೂ ಮಹಿಳೆಯರಿಗೆ ದೊರೆತಿಲ್ಲ. ಸಂಘ ಪ್ರಾರಂಭವಾಗಿ ಏಳು ವರ್ಷಗಳಾಗಿದ್ದರೂ, ಇದುವರೆಗೂ ಬೆಣ್ಣೆ ಅಂಶದ ಆಧಾರದ ಮೇಲೆ ಬೆಲೆ ನಿಗದಿ ಮಾಡಬೇಕೆನ್ನುವ, ಅದನ್ನು ಕೇಳುವ ಹಕ್ಕು ನಮಗಿದೆಯೆಂದು ಇದುವರೆಗೂ ಯಾರು ತಿಳಿಸಿರಲಿಲ್ಲವೆಂದು ಚಿಕ್ಕಳ್ಳಿಯಲ್ಲಿ 6 ವರ್ಷಗಳಿಂದ ಹಾಲು ಹಾಕುತ್ತಿರುವ ಗೌರಿ ನುಡಿಯುತ್ತಾಳೆ. ಇದು ಕೇವಲ ಗೌರಿಯ ಅನುಭವ ಮಾತ್ರವಲ್ಲ. ಹಾಲು ಸರಬರಾಜು ಮಾಡುವ ಪ್ರತಿಯೊಬ್ಬ ಮಹಿಳೆಯ ಅನುಭವವೂ ಇದು.

ಸ್ತ್ರೀಯರಲ್ಲಿರುವ ಈ ವ್ಯವಹಾರಿಕ ಜ್ಞಾನದ ಕೊರತೆ ಇತರ ವಿಚಾರಕ್ಕೂ ಅನ್ವಯವಾಗುತ್ತದೆ. ಹಣಕಾಸಿನ ವಿಚಾರ, ಸಂಘದ ಆಡಳಿತದ ಬಗ್ಗೆ, ತಾಂತ್ರಿಕ ವಿಷಯಗಳ ಬಗ್ಗೆ ಮಹಿಳೆಯರು ಸಂಪೂರ್ಣ ಕುರುಡಾಗಿದ್ದಾರೆ. ಹೈನುಗಾರಿಕೆಯಲ್ಲಿ ಮಿಶ್ರತಳಿ ಹಸುಗಳನ್ನು ಪಡೆಯಲು ಅನುಸರಿಸುವ ಕೃತಕ ಗರ್ಭಧಾರಣೆಯ ತಾಂತ್ರಿಕ ವಿಧಾನದ ಅಳವಡಿಕೆಯ ವಿಚಾರದಲ್ಲಿ ಸ್ತ್ರೀಯರು ಸಂಪೂರ್ಣವಾಗಿ ದೂರವಿರುವುದನ್ನು ಕಾಣಬಹುದು. ಮಿಶ್ರತಳಿಯ ಬಗ್ಗೆ ಸ್ತ್ರೀಯರಿಗೆ ಇರುವ ಮಾಹಿತಿಯ ಕೊರತೆ, ಪುರುಷರಿಂದ ನಿಯಂತ್ರಿತವಾದ ಸಂಘದ ವಾತಾವರಣ, ದೂರದ ಗ್ರಾಮಕ್ಕೆ ಹಸುಗಳನ್ನು ಹೊಡೆದು ಕೊಂಡು ಹೋಗಬೇಕಾದ ಅಗತ್ಯಗಳಿಂದಾಗಿ ಈ ವಿಚಾರದಲ್ಲಿ ಸ್ತ್ರೀಯರು ಸಂಪೂರ್ಣವಾಗಿ ಪುರುಷ ರನ್ನೇ ಅವಲಂಬಿಸಿರಬೇಕಾಗುತ್ತದೆ. ಈ ವಾತಾವರಣದ ಜೊತೆಗೆ ಡಂಕಲ್ ಪ್ರಸ್ತಾವನೆಯಲ್ಲಿನ ವಿಚಾರಗಳು ಜಾರಿಗೆ ಬಂದರೆ ತಳಿ ಅಭಿವೃದ್ಧಿಯಲ್ಲಿ ಸ್ವಾವಂಬನೆಯನ್ನು ಸಂಪೂರ್ಣವಾಗಿ ನಾಶಪಡಿಸಲಾಗುತ್ತದೆ. ಈಗಾಗಲೇ ಆಧುನಿಕ ತಂತ್ರಜ್ಞಾನಗಳಿಗೆ ಪರಕೀಯರಾಗಿರುವ ಪುರುಷರಿಗೆ ಅವಲಂಬಿತವಾಗಿರುವ ಸ್ತ್ರೀಯರು ವಿದೇಶಿ ಗುಲಾಮರೂ ಸಹ ಆಗಬೇಕಾಗಿರುವುದು ಅವರಿಗರಿ ವಿಲ್ಲದೇ ಅನಿವಾರ್ಯವಾಗುತ್ತದೆ.

ಇರಿತಹ ಯೋಜನೆಗಳನ್ನು ರೂಪಿಸುವಾಗ ಹೈನು ಗಾರಿಕೆಯಲ್ಲಿ ತೊಡಗಿದ ಮಹಿಳೆಯರ ಶ್ರಮಶಕ್ತಿಯನ್ನು ಅಗೋಚರಗೊಳಿಸಿ, ಅವರ ಭಾಗವಹಿಸುವಿಕೆಗೆ ಪೂರಕ ವಾದ ಸ್ವರೂಪದ ಯೋಜನೆಗಳನ್ನು ರೂಪಿಸದೇ ಇರುವು ದರಿಂದ ಈ ಗೊಂದಲಗಳು ಉಂಟಾಗುತ್ತಿವೆ. ಇದರ ಪರಿಣಾಮವಾಗಿ ಹೈನುಗಾರಿಕೆಯಲ್ಲಿ ತೊಡಗಿದ ಗ್ರಾಮೀಣ ಮಹಿಳೆಯರು ಮೂಲೆ ಗುಂಪಾಗಿದ್ದಾರೆ. ಪುರುಷರಿಂದ ರೂಪಿತವಾಗುವ ಯೋಜನೆಗಳು ಸಹಜ ವಾಗಿ ಪುರುಷರನ್ನು ಗಮನದಲ್ಲಿಟ್ಟುಕೊಂಡು ರೂಪಿತ ವಾಗುತ್ತದೆ. ಪ್ರಾರಂಭದಲ್ಲಿ ಕಂಡುಬಂದಿರುವ ಹೆಣ್ಣು-ಗಂಡಿಗೆ ಸಮವಾದ ಅವಕಾಶ ಕಲ್ಪಿಸಿಕೊಡುವ ಪ್ರಯತ್ನ ವನ್ನು ನಂತರದ ವರ್ಷಗಳಲ್ಲಿ ಹಲವಾರು ವಿಶೇಷ ಯೋಜನೆಗಳ ಮೂಲಕ ಸ್ತ್ರೀಯರ ಶ್ರಮಶಕ್ತಿಯನ್ನು

ಗುರುತಿಸುವ ಪ್ರಯತ್ನ ಮಾಡಿದರೂ, ಪುರುಷರೇ ಸಂಪೂರ್ಣ ಸ್ವಾಮ್ಯ ಹೊಂದಿದ, ಅದರ ಫಲವನ್ನು ಅನುಭವಿಸುತ್ತಿರುವ ಪುರುಷರು ಸುಲಭವಾಗಿ ಸ್ತ್ರೀಯರ ಕೈಗೆ ಬಿಟ್ಟುಕೊಡಲಾರರು.

**ಕೃಷಿ**

ಗ್ರಾಮೀಣ ಮಹಿಳೆಯರು ಕೃಷಿ ಹಾಗೂ ಕೃಷಿಗೆ ಪೂರಕವಾದ ಕೆಲಸ ಕಾರ್ಯಗಳಲ್ಲಿ ತೊಡಗಿರುವುದನ್ನು ನಾವು ಕಾಣಬಹುದು. ಸಂಪೂರ್ಣವಾಗಿ ಕೃಷಿ ಕೆಲಸದಲ್ಲೇ ತೊಡಗಿರುವ ಸ್ತ್ರೀಯರನ್ನು ನಾವು ಗ್ರಾಮೀಣ ಪರಿಸರದಲ್ಲಿ ಕಾಣುವುದು ಅಪರೂಪ. ಮನೆಗೆಲಸ, ಪಶು ಸಂಗೋಪನೆ, ರೇಷ್ಮೆ ಹೀಗೆ ಒಟ್ಟಿಗೆ ಎಲ್ಲಾ ಕೆಲಸಗಳಲ್ಲಿ ಮಹಿಳೆಯರು ತೊಡಗಿರುವುದನ್ನು ನಾವು ಪ್ರಮುಖವಾಗಿ ಗಮನಿಸಬಹುದು.

ಆಹಾರ ಬೆಳೆಗಳನ್ನು ಬೆಳೆಯುತ್ತಿದ್ದ, ಇಂದಿಗೂ ಬೆಳೆಯುತ್ತಿರುವ ಕೃಷಿ ಚಟುವಟಿಕೆಯಲ್ಲಿ ಸ್ತ್ರೀಯರು ಹೆಚ್ಚಿನ ಪ್ರಮಾಣದಲ್ಲಿ ಭಾಗವಹಿಸುವುದನ್ನು ನೋಡಬಹುದು. ರಾಗಿ, ಭತ್ತ ಇತರ ಕಾಳುಗಳನ್ನು ಬೆಳೆಯುವಲ್ಲಿ ಸ್ತ್ರೀಯರು ಇಂದಿಗೂ ಹೆಚ್ಚಿನ ಪ್ರಮಾಣದಲ್ಲಿ ತೊಡಗಿದ್ದಾರೆ. ನಾಟಿ ಮಾಡುವುದು, ಕಳೆ ತೆಗೆಯುವುದು, ಕಣ ಮಾಡುವುದು, ಶುಚಿ ಮಾಡುವುದು, ಶೇಖರಣೆ ಮುಂತಾದ ಕೆಲಸಗಳನ್ನು ಸ್ತ್ರೀಯರೇ ನಿರ್ವಹಿಸುತ್ತಾರೆ. ಮೂಟೆಗಳು ಮನೆಗೆ ಬರುವವರೆಗೆ ಸ್ತ್ರೀಯರು ಬೆವರು ಸುರಿಸಿ ದುಡಿಯುತ್ತಾರೆ. ನಾನಾ ತರದ ಕಾಳುಗಳನ್ನು ಬೆಳೆಯುವ ಸ್ತ್ರೀಯರು ಮುಂದಿನ ಬಿತ್ತನೆಗೆ ಬೇಕಾದ ಉತ್ತಮ ಕಾಳುಗಳನ್ನು ಬೆಳೆಯಬಹುದು.

ಆಹಾರ ಬೆಳೆಗಳನ್ನು ಬಿಟ್ಟು ಗ್ರಾಮೀಣ ಜನರು ವಾಣಿಜ್ಯ ಬೆಳೆಗಳಾದ ಕಬ್ಬು, ರೇಷ್ಮೆ, ತೆಂಗು, ಮಾವು ಮುಂತಾದವುಗಳಿಗೆ ನೀಡುತ್ತಿದ್ದ ಹಾಗೆ ಸ್ತ್ರೀಯರು ಕೃಷಿಯಿಂದ ದೂರ ಸರಿಯುತ್ತಿರುವುದನ್ನು ಅವರ ಶ್ರಮ ಅಗೋಚರವಾಗುತ್ತಿರುವುದನ್ನು ಗಮನಿಸಬಹುದು. ಕೆಲವು ವಾಣಿಜ್ಯ ಕೃಷಿಯಲ್ಲೂ, ಸ್ತ್ರೀಯರ ಅಷ್ಟೇ ಶ್ರಮವನ್ನು ವ್ಯಯಿಸಿದರೂ, ಅದು ನೇರವಾದ ಬೆಲೆಯನ್ನು ಪಡೆಯುವುದಿರಲಿ, ಗುರುತಿಸುವುದರಿಂದಲೂ ವಂಚಿತವಾಗುತ್ತಿದೆ.

ವಾಣಿಜ್ಯ ಬೆಳೆಗಳಿಂದ ರೈತರ ಆರ್ಥಿಕ ಜೀವನ ಸುಧಾರಿಸಿದರೂ, ಸಣ್ಣ ಹಿಡುವಳಿದಾರರಾದ ಸ್ತ್ರೀ ಪುರುಷರಿಬ್ಬರ ಮೇಲೂ ತೀವ್ರವಾದ ಪರಿಣಾಮವನ್ನು ಉಂಟುಮಾಡಿರುವುದನ್ನು ನಾವು ಕಾಣಬಹುದು. ವಾಣಿಜ್ಯ ಬೆಳೆಗಳು ಹೆಚ್ಚು ಭೂಮಿಯನ್ನು ಹೊಂದಿದ ಹಾಗೂ ಮಧ್ಯಮ ರೈತರಿಗೆ ನೆರವಾದಷ್ಟು ಅರ್ಧ ಎಕರೆ, ಒಂದು ಎಕರೆ ಭೂಮಿ ಇರುವ ರೈತ ಕುಟುಂಬಗಳಿಗೆ ಸಹಾಯಕವಾಗಿಲ್ಲ. ಇತ್ತ ಹೆಚ್ಚು ಬಂಡವಾಳ ಹಾಕಿ ವಾಣಿಜ್ಯ ಬೆಳೆಯನ್ನು ಬೆಳೆಯಲಾರದೆ, ಆಹಾರ ಪದಾರ್ಥಗಳನ್ನು ಬೆಳೆಯಲಾರದೆ ಭೂಮಿಯನ್ನು ಮಾರಿಕೊಳ್ಳುವುದು ಅಥವಾ ಹಾಗೇ ಪಾಳು ಬಿಟ್ಟು ಬಿಡುವುದು ತೀರಾ ಸಾಮಾನ್ಯ.

ವಾಣಿಜ್ಯ ಬೆಳೆಗಳ ಸ್ವರೂಪ, ಬಿತ್ತನೆ ಬೀಜವನ್ನು ಹೊರಗಡೆಯಿಂದ ತರುವುದು, ನವೀನ ಮಾದರಿಯ ರಸಾಯನಿಕ ಗೊಬ್ಬರಗಳನ್ನೂ ಉಪಯೋಗಿಸುವುದು ಮಾರಾಟದ ಸ್ವರೂಪ ಮುಂತಾದವುಗಳು ಸ್ತ್ರೀಯರ ಜೀವನದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ. ರಾಮನಗರದ ಚೌಕಳ್ಳಿಯಲ್ಲಿ 1 ಎಕರೆ 2 ಎಕರೆ ಕಬ್ಬು ಬೆಳೆಯುತ್ತಿದ್ದು, ಅದನ್ನು ಸ್ವತಃ ರೈತರೆ ಬೆಲ್ಲ ಮಾಡಿಮಾರುತ್ತಿದ್ದರು. ಮಾರಾಟದ ವ್ಯವಸ್ಥೆ ಇಲ್ಲದ ಕಾರಣ ತಮಗೆ ಬೆಲ್ಲ ಮಾಡಲು ಸಾಧ್ಯವಾಗುವಷ್ಟು ಕಬ್ಬನ್ನು ಬೆಳೆಯುತ್ತಿದ್ದರು. ಕ್ರಮೇಣ ಸುತ್ತಮುತ್ತ ನಾಲ್ಕು ಸಕ್ಕರೆಯ ಕಾರ್ಖಾನೆಗಳು ಪ್ರಾರಂಭವಾಗಿ ಸ್ಥಳೀಯವಾಗಿಯೇ ಉತ್ತಮವಾದ ಮಾರುಕಟ್ಟೆ ವ್ಯವಸ್ಥೆ ದೊರೆತಾಗ ಆಹಾರ ಪದಾರ್ಥಗಳನ್ನು ಸಂಪೂರ್ಣವಾಗಿ ಬಿಟ್ಟು ಎಲ್ಲರೂ ಕಬ್ಬನ್ನೂ ಬೆಳೆಯತೊಡಗಿದರು. ಜೊತೆಗೆ ರಾಗಿ ಭತ್ತ ಬೆಳೆಯುವುದು ಅವರಿಗೆ ಲಾಭದಾಯಕವೂ ಅಲ್ಲ. ಆಹಾರ ಬೆಳೆಗಳನ್ನು ಬೆಳೆದು ನಷ್ಟಮಾಡಿಕೊಳ್ಳುವುದಕ್ಕಿಂತ, ಅದರ ಮೂರು ಪಟ್ಟು ಲಾಭವನ್ನು ಕಬ್ಬಿನಲ್ಲಿ ಪಡೆದ ಅನುಭವ ಅವರಿಗಿರುವುದರಿಂದ ರೈತರು ಕಬ್ಬಿನ ಬೆಳೆಯನ್ನು ಬೆಳೆಯಲು ತೀವ್ರವಾದ ಆಸಕ್ತಿಯನ್ನು ತೋರಿಸುತ್ತಿದ್ದಾರೆ.

ಹೀಗೆ ಆಹಾರ ಬೆಳೆಯಿಂದ ವಾಣಿಜ್ಯ ಬೆಳೆಗಳಿಗೆ ಹಸ್ತಾಂತರವಾಗುವ ಪಕ್ರಿಯೆಯಲ್ಲಿ ಸ್ತ್ರೀಯರು ಈ ವಾಣಿಜ್ಯ ಕೃಷಿಯಿಂದ ಸಂಪೂರ್ಣವಾಗಿ ದೂರಾಗುತ್ತಿದ್ದಾರೆ. ಇಡೀ ಚೌಕಳ್ಳಿಯಲ್ಲಿ ದೀಪ ಹಚ್ಚಿ

ಹುಡುಕಿದರೂ ಹೊಲಕ್ಕೆ ಹೋಗಿ ದುಡಿಯುವ 3 ಜನ ಹೆಂಗಸರನ್ನು ಕಾಣಬಹುದು- ರತ್ನಮ್ಮ ಹೇಳುತ್ತಾಳೆ. ದೊಡ್ಡ ಪ್ರಮಾಣದಲ್ಲಿ ಬೆಳೆಯುವ ಕಬ್ಬಿನ ಕೆಲಸದಲ್ಲಿ ಸ್ತ್ರೀಯರು ದುಡಿಯುವುದು ತೀರಾ ಕಡಿಮೆ. ಕಬ್ಬು ನಾಟಿ ಮಾಡುವುದು, ಕಳೆ ತೆಗೆಯುವುದು, ಕತ್ತರಿಸುವುದು ಮುಂತಾದ ಕೆಲಸಗಳಲ್ಲಿ ಸ್ತ್ರೀಯರು ಭಾಗವಹಿಸುತ್ತಾರೆ. ಈ ಊರಿನ ಕಬ್ಬಿನ ಕೃಷಿಯಲ್ಲಿ ತೊಡಗಿದ ಮಹಿಳೆಯು ರೆಂದರೆ ಕಡಿಮೆ ಭೂಮಿ ಇರುವ ರೈತ ಮಹಿಳೆಯರು, ಅವರದೇ ಹೊಲದಲ್ಲಿ ಕೆಲಸ ಮಾಡುತ್ತಾರೆ. ಚೌಕಳ್ಳಿಯ ಕಬ್ಬಿನ ಕೃಷಿಯಲ್ಲಿ ಕೆಲಸ ಮಾಡುವ ಹೆಂಗಸರು ಅಕ್ಕಪಕ್ಕದ ಗ್ರಾಮದ ಮಹಿಳೆಯರು. ಆರ್ಥಿಕ ಸ್ಥಿತಿ ಸುಧಾರಿಸುತ್ತಿದ್ದ ಹಾಗೆ ಗ್ರಾಮದ ಸ್ತ್ರೀಯರು ತಮ್ಮದೇ –ಭೂಮಿಯ ಸಂಬಂಧವನ್ನು ಕಡಿದುಕೊಂಡಿದ್ದಾರೆ. ಜೊತೆಯಲ್ಲಿ ಮನೆಕೆಲಸಕ್ಕೆ ಹೆಚ್ಚು ಸೀಮಿತಗೊಳಿಸಿ ಕೊಳ್ಳುವುದರೊಂದಿಗೆ ಹೈನುಗಾರಿಕೆಯಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆ.

ಕಡಿಮೆ ಭೂಮಿಯನ್ನು ಹೊಂದಿದ ಸ್ತ್ರೀಯರು ಇತ್ತ ವಾಣಿಜ್ಯ ಬೆಳೆಗಳನ್ನು ಬೆಳೆಯಲಾರದೆ, ಆಹಾರ ಬೆಳೆಗಳನ್ನು ಬೆಳೆಯಲಾರದೇ, ಸಣ್ಣಪುಟ್ಟ ವೃತ್ತಿಗಳನ್ನು ಆಯ್ದುಕೊಳ್ಳುತ್ತಿದ್ದಾರೆ ಬಾನಂದೂರಿನ ಶಂಬಮ್ಮ ಕೇವಲ ಒಂದು ಎಕರೆ ಭೂಮಿಯನ್ನೇ ಹೊಂದಿದ್ದು ಅರ್ಧ ಎಕರೆಗೆ ಕಬ್ಬು, ಇನ್ನರ್ಧ ಎಕರೆಗೆ ರಾಗಿ ಹಾಕಿದ್ದಾಳೆ. 'ಈ ಒಂದು ಎಕರೆಯಲ್ಲಿ ಜೀವನ ಮಾಡಲು ಆಗುತ್ಯೆ ? ನಾನು ಹೊಲಕ್ಕೆ ಹೋಗಿ ಕಳೆ ತೆಗೆದು ಅಗತ್ಯವಿರುವ ಕೆಲ್ಸಾ ಮಾಡ್ತೀನಿ. ಜೊತೆಗೆ ಬಟ್ಟೆ ಇಸ್ತ್ರೀ ಮಾಡುತ್ತೇನೆ ಎನ್ನುತ್ತಾಳೆ. ಚೌಕಳ್ಳಿಯ ಜಯಮ್ಮ ಅಲ್ಪಸ್ವಲ್ಪ ಹೊಲದಲ್ಲಿ ಜೀವನ ಸಾಗಿಸ ಲಾಗದೆ ಸಣ್ಣ ಅಂಗಡಿಯನ್ನು ಮನೆಯಲ್ಲಿಯೇ ನಡೆಸು ತ್ತಾಳೆ. ಬೆಂಗಳೂರಿನಿಂದ ತರಕಾರಿಗಳನ್ನು ತೆಗೆದು ಕೊಂಡು ಹೋಗಿ ತಮ್ಮ ಹಳ್ಳಿಯಲ್ಲಿ ಮಾರಾಟ ಮಾಡುತ್ತಾಳೆ.

ಕಡಿಮೆ ಭೂಮಿ ಇರುವ ರೈತರು ಎತ್ತು, ವ್ಯವಸಾಯಕ್ಕೆ ಬೇಕಾದ ಇತರ ಪರಿಕರಗಳನ್ನು, ಗೊಬ್ಬರ ಮುಂತಾದವುಗಳನ್ನು ಸಕಾಲದಲ್ಲಿ ಹೊಂದಿಸಿ ಕೊಳ್ಳಲಾಗದೇ ಹೊಲವನ್ನು ಪಾಳುಬಿಟ್ಟು ಬಿಡುತ್ತಾರೆ. ಇಲ್ಲವೆ ಗ್ರಾಮದಲ್ಲಿನ ಬಲಿಷ್ಟ ರೈತರಿಗೆ ಮಾರಿಬಿಡುತ್ತಾರೆ.

ಅಲ್ಪಸ್ವಲ್ಪ ಹೊಲವಿರುವವರು ಇಂದಿಗೂ ವ್ಯವಸಾಯ ವನ್ನು ಮಾಡುತ್ತಿದ್ದರೆ, ಅದು ಕೇವಲ ಆ ಮನೆಯ ಸ್ತ್ರೀಯರಲ್ಲಿರುವ ಆಸಕ್ತಿ, ಹಾಗೂ ಶ್ರಮದಿಂದ. ಭೂಮಿಯನ್ನು ಕಳೆದು ಕೊಂಡವರು ಕ್ರಮೇಣ ಕೃಷಿ ಕೂಲಿಕಾರರಾಗಿ ದುಡಿಯಲು ಪ್ರಾರಂಭಿಸುತ್ತಾರೆ. ಇಲ್ಲವೆ, ಬೇರೆ ವೃತ್ತಿಯನ್ನರಸಿ ಪಟ್ಟಣಕ್ಕೆ ವಲಸೆ ಹೋಗುತ್ತಾರೆ. ಈ ಹೊರೆ ಕುಟುಂಬದ ಸ್ತ್ರೀಯರ ಮೇಲೆ ಬೀಳುವುದೇ ಹೆಚ್ಚು.

ರಾಮನಗರ ತಾಲ್ಲೂಕಿನ ಉರಗಹಳ್ಳಿಯಲ್ಲಿ ಹೊರ ದೇಶಗಳಿಗೆ ರಫ್ತು ಮಾಡುವ ನಾಮಧಾರಿ ಬೀಜೋತ್ಪಾದನೆಯ ಫಾರಂನಲ್ಲಿ, ದೂರದ 7–8 ಮೈಲಿ ಗ್ರಾಮ ಗಳಿಂದ ಸುಮಾರು 200 ಜನರಷ್ಟು ಹೆಣ್ಣು ಮಕ್ಕಳು ದುಡಿಯುತ್ತಿದ್ದಾರೆ. ಕೆಲಸಕ್ಕೆ ಬರುವ ಪ್ರತಿಯೊಬ್ಬ ಸ್ತ್ರೀಯರ ಕುಟುಂಬಗಳೂ ಅಲ್ಪ ಸ್ವಲ್ಪ ಭೂಮಿಯನ್ನು ಹೊಂದಿದೆ. ಆದರೆ ಆ ಹೊಲದಲ್ಲಿ ವ್ಯವಸಾಯ ಮಾಡಿ ಜೀವನ ನಿರ್ವಹಿಸಲು ಸಾಧ್ಯವಿಲ್ಲವೆಂಬುದು ಕಟು ವಾಸ್ತವ. ಅದಕ್ಕಿಂತ ಪ್ರತಿದಿನವೂ ಸಿಗುವ ಕೂಲಿಯೇ ಒಂದು ದಿನದ ಭದ್ರತೆಯನ್ನಾದರೂ ನೀಡುತ್ತದೆ. ಈ ಭರವಸೆಯನ್ನು ಅವರು ಹೊಂದಿದ ತುಂಡು ಭೂಮಿ ನೀಡಲಾರದು.

ಇಟ್ಟಮಡುವಿನ ಗಂಡನಿಲ್ಲದ ಸಿದ್ದಗಂಗಮ್ಮನಿಗೆ ಒಂದು ಎಕರೆ ಜಮೀನಿದೆ. "ಮಳೆ ಬಿದ್ದಾಗ ಒಂದು ಹತ್ತು ಮೂಟೆರಾಗಿ ಬೆಳೀತೀನಿ. ಅದೂ ಸರಿಯಾದ ಗೊಬ್ಬರ ಹಾಕಿದರೆ, ಇಲ್ಲದಿದ್ದರೆ ಅದೂ ಇಲ್ಲ, 10 ಮೂಟೆ ಬೆಳೆದರೂ ಅದು ಹೊಟ್ಟೆಗೇ ಸಾಲುವುದಿಲ್ಲ. ಕೂಲಿ ನಾಲಿ ಮಾಡಿಕೊಂಡು ಜೀವನ ಮಾಡಬೇಕು" ಎನ್ನುತ್ತಾಳೆ. ಗಾಣಕಲ್ಲಿನ ಲಕ್ಷ್ಮಮ್ಮ ಗಂಡ ತೀರಿ ಕೊಂಡ 20 ವರ್ಷಗಳಿಂದಲೂ ವಯಸ್ಸಾದ ತಾಯಿ ಯೊಂದಿಗೆ ಬದುಕುತ್ತಿದ್ದಾಳೆ. ಸಾಕಷ್ಟು ಜಮೀನಿದ್ದರು ಅದನ್ನು ಉಳಿಮೆ ಮಾಡಲಾಗದೇ, ಪಾಲಿಗೆ ಕೊಟ್ಟು ಮನೆಗಾಗುವಷ್ಟನ್ನೂ ಮಾತ್ರ ಬೆಳೆಯುತ್ತಾಳೆ. ದೈನಂದಿನ ಖರ್ಚಿಗೆ ಮನೆಯಲ್ಲಿಯೇ ಇಡ್ಲಿ ಮಾಡಿ ಹಳ್ಳಿ ಹಳ್ಳಿಗಳಲ್ಲಿ ಸುತ್ತಿ ದಿನಕ್ಕೆ 7-8 ರೂ.ಗಳನ್ನು ಸಂಪಾದಿಸುತ್ತಾಳೆ.

ವಾಣಿಜ್ಯ ಬೆಳೆಗಳು, ಬೆಳೆಯ ನೀತಿಗಳು ಚಿಕ್ಕ ಹಿಡುವಳಿದಾರರ ಸಮಸ್ಯೆಗಳನ್ನು ಗಮನ ತೆಗೆದುಕೊಳ್ಳು ವುದಿಲ್ಲ. ವಾಣಿಜ್ಯ ಬೆಳೆಗಳು ಕುಟುಂಬದ ಆದಾಯ

ವನ್ನು ಹೆಚ್ಚಿಸುತ್ತಿದ್ದ ಹಾಗೆ ಸ್ತ್ರೀಯರ ಬಗ್ಗೆ ಸಮಾಜದಲ್ಲಿ ಪ್ರಚಲಿತವಿರುವ ಪಿತೃಪ್ರಧಾನ ಮೌಲ್ಯಗಳನ್ನು ಅಳವಡಿಸಿಕೊಳ್ಳುತ್ತವೆ. ಸ್ತ್ರೀಯರ ಆರ್ಥಿಕ ಚಟುವಟಿಕೆಗಳನ್ನು ಗೃಹವ್ಯಾಪ್ತಿಗೆ ಸೇರಿಸಿ ಬಿಡುವುದರೊಂದಿಗೆ ಸ್ತ್ರೀಯರನ್ನು ಹಿನ್ನೆಲೆಗೆ ತಳ್ಳಿ ಅವರ ಶ್ರಮ ಅವನ್ನು ಅಗೋಚರಗೊಳಿಸುತ್ತದೆ. ಇನ್ನೊಂದು ಕಡೆ ಸ್ತ್ರೀಯರಿಂದ ಅವರ ಭೂಮಿಯನ್ನೂ ಕಸಿದುಕೊಂಡು ಅವರನ್ನು ಕೇವಲ ಕೃಷಿ ಕಾರ್ಮಿಕರಾಗುವಂತೆ ಮಾಡುತ್ತದೆ. ಹೀಗೆ ಸ್ತ್ರೀಯರ ಮಧ್ಯೆ ಒಂದು ವರ್ಗ ಗೋಡೆ ನಿರ್ಮಿತವಾಗಿ ಸ್ತ್ರೀಯರನ್ನು ವಿಭಜಿಸುತ್ತದೆ.

ರೇಷ್ಮೆ ಕೃಷಿ ರೈತರ ದುಡಿಮೆಗೆ ನಿಜವಾದ ಅರ್ಥದಲ್ಲಿ 'ಬೆಲೆ'ಯನ್ನೂ, ತಂದು ಕೊಟ್ಟ ಜನಪ್ರಿಯ ವಾಣಿಜ್ಯ ಬೆಳೆ ಇತರ ಯಾವುದೇ ರೀತಿಯ ಕೃಷಿಯಲ್ಲಿ ಪಡೆಯದ ಲಾಭ, ಉತ್ತಮ ಬೆಲೆ, ಮಾರುಕಟ್ಟೆ ಮುಂತಾದವು ಗ್ರಾಮೀಣ ಜನತೆಯ ಆರ್ಥಿಕ ಜೀವನದ ಸ್ಥಿತಿಗತಿಯನ್ನು ಉತ್ತಮ ಪಡಿಸಿರುವುದು ಅತಿಶಯೋಕ್ತಿಯೇನಲ್ಲ. ರೈತರು ರೇಷ್ಮೆ ಕೃಷಿಯನ್ನು ಗಂಭೀರವಾಗಿ ತೆಗೆದು ಕೊಂಡಿರುವ ಹಲವಾರು ಕಾರಣಗಳಲ್ಲಿ ಪ್ರಮುಖವಾದುದು ಆರ್ಥಿಕಲಾಭ. ಈ ದೃಷ್ಟಿಯಿಂದ ರೇಷ್ಮೆ ಜನಪ್ರಿಯ ವಾಣಿಜ್ಯ ಬೆಳೆಯಾಗಿದೆ.

ಆದರೆ ಈ ವಾಣಿಜ್ಯ ಬೆಳೆಯಲ್ಲಿ ಮಹಿಳೆಯರು ವಹಿಸುವ ಪಾತ್ರವನ್ನು ಗಮನಿಸಿದರೆ, ಆಶ್ಚರ್ಯಕರವೆನ್ನುವಷ್ಟು ಲಿಂಗಾಧಾರಿತ ಶ್ರಮ ವಿಭಜನೆಯನ್ನು ನಾವು ನೋಡಬಹುದು. 1994ರಲ್ಲಿ ಸರ್ಕಾರ ರೇಷ್ಮೆ ಮಹಿಳಾವರ್ಷವೆಂದು ಆಚರಿಸುತ್ತಿರುವುದು ರೇಷ್ಮೆಯ ಕೃಷಿಯಲ್ಲಿ, ಉದ್ದಿಮೆಯಲ್ಲಿ ತೊಡಗಿರುವ ಮಹಿಳೆಯರ ಬಗ್ಗೆ ಇರುವ ಟೊಳ್ಳು ಕಾಳಜಿ ಒಂದು ವ್ಯಂಗ್ಯವೇ ಸರಿ, ರೇಷ್ಮೆ ಮತ್ತು ಅದರ ಅವಲಂಬಿತ ಕೆಲಸಗಳಲ್ಲಿ ಸುಮಾರು 60 ಲಕ್ಷ ಜನರಲ್ಲಿ ಶೇ 60 ರಷ್ಟು ಮಹಿಳೆಯರೇ ಇದ್ದಾರೆ. ರೇಷ್ಮೆ ಸೊಪ್ಪು ಬೆಳೆಯುವುದು, ಸೊಪ್ಪು ಕೀಳುವುದು, ಹುಳು ಸಾಕುವುದು, ರೀಲಿಂಗ್- ಟ್ವಿಸ್ಟಿಂಗ್ ಹೀಗೆ ವಿವಿಧ ಹಂತಗಳಲ್ಲಿ ಸ್ತ್ರೀಯರು ತೊಡಗಿರುವುದನ್ನು ನಾವು ಕಾಣಬಹುದು. ಎಲ್ಲಾ ಹಂತಗಳಲ್ಲೂ ಸ್ತ್ರೀಯರು ಅವಿಭಾಜ್ಯ ಅಂಗವಾಗಿದ್ದಾರೆ.

ರೇಷ್ಮೆ ಕೃಷಿ ಹಾಗೂ ಹುಳುವಿನ ಸಾಕಾಣಿಕೆಯಲ್ಲಿ ಸ್ತ್ರೀಯರೇ ಸಂಪೂರ್ಣವಾಗಿ ಕೆಲಸವನ್ನು ನಿರ್ವಹಿಸುತ್ತಾರೆ. ರೇಷ್ಮೆ ಸಾಕುವ ಮನೆಗಳಿಗೆ ಕಾಲಿಟ್ಟರೆ, ಒಂದು ರೀತಿಯಲ್ಲಿ ಗೃಹ ಉದ್ಯೋಗವೆನ್ನುವಷ್ಟು ಸ್ತ್ರೀಯರು, ಅದರಲ್ಲಿಯೇ ತೊಡಗಿರುತ್ತಾರೆ. ರೇಷ್ಮೆ ವಾಣಿಜ್ಯ ಬೆಳೆಯಾಗಿರುವುದರ ಜೊತೆಗೆ 'ಗೃಹ'ದ ಒಳಗೆ ಸಾಕಾಣಿಕೆಯು ನಡೆಯುವುದು, ಹುಳುಗಳ ಸಾಕಾಣಿಕೆ ಗೃಹಕೃತ್ಯದ ಒಂದು ಭಾಗವಾಗಿ ಬಿಟ್ಟಿದೆ. ಸ್ತ್ರೀಯರು ಮನೆಗೆಲಸದ ಒಂದು ಭಾಗವಾಗಿ ಇದನ್ನು ನೋಡುತ್ತಾರೆ.

ರೇಷ್ಮೆ ಕೃಷಿಯಲ್ಲಿ ಕಂಡು ಬರುವ ಶ್ರಮ ವಿಭಜನೆ ಲಿಂಗಾಧಾರಿತವಾಗಿದೆ. ಒಮ್ಮೆ ಸೊಪ್ಪನ್ನು ಬೆಳೆದು, ಮೊಟ್ಟೆಗಳನ್ನು ತಂದು ಕೊಡುವುದು, ಗೂಡನ್ನು ತೆಗೆದು ಕೊಂಡು ಹೋಗಿ ಮಾರಾಟ ಮಾಡುವುದು. ಈ ಎರಡು ಕೆಲಸಗಳನ್ನು ಸಾಮಾನ್ಯವಾಗಿ ಗಂಡಸರೇ ಮಾಡುತ್ತಾರೆ. ಇನ್ನುಳಿದಂತೆ ಚಾಕಿ ಕಟ್ಟುವುದು, ಸೊಪ್ಪನ್ನು ಕತ್ತರಿಸಿ ಹಾಕುವುದು, ಹುಳುಗಳನ್ನು ಮೇಯಿಸುವುದು, ತಟ್ಟೆ ಬದಲಾಯಿಸುವುದು, ಚಂದ್ರಿಕೆಗೆ ಬಿಡುವುದು, ಗೂಡು ಬಗೆಯುವುದು ಎಲ್ಲಾ ಕೆಲಸಗಳನ್ನು ಸಾಮಾನ್ಯವಾಗಿ ಹೆಂಗಸರೇ ಮಾಡುತ್ತಾರೆ.

ಸಂಗಬಸವನದೊಡ್ಡಿ ರಂಗಮ್ಮನ ಮನೆಯಲ್ಲಿ ಸುಮಾರು 300 ಮೊಟ್ಟೆ ಮೇಯಿಸುತ್ತಾರೆ. ಗಂಡ ವ್ಯವಸಾಯದ ಜೊತೆಗೆ "ಕಂಟ್ರಾಕ್ಟರ್ ಕೆಲಸವನ್ನು ಮಾಡುವುದರಿಂದ ಹುಳ ಮೇಯಿಸುವ ಸಂಪೂರ್ಣ ಹೊರೆ ರಂಗಮ್ಮನ ಮೇಲಿದೆ. ಅಗತ್ಯವಿದ್ದಾಗ ಕೂಲಿ ಕೆಲಸಕ್ಕೆ ತೆಗೆದು ಮಾಡಿದರೂ, ಇನ್ನುಳಿದಂತೆ ಹುಳು ಮೇಯಿಸುವ ಕೆಲಸವನ್ನು ಆಕೆಯೇ ನಿರ್ವಹಿಸುತ್ತಾಳೆ. ಗಂಡ ಮೊಟ್ಟೆ ತಂದು ಗೂಡು ತೆಗೆದುಕೊಂಡು ಹೋಗುತ್ತಾರೆ ಎನ್ನುತ್ತಾರೆ.

ರೇಷ್ಮೆಯ ಕೃಷಿ ಸ್ತ್ರೀಯರ ಮೇಲಿನ ಹೊರೆಯನ್ನು ತೀವ್ರವಾಗಿ ಹೆಚ್ಚಿಸಿದೆ. ಮನೆಗೆಲಸ, ಹಸುಗಳನ್ನು ಸಾಕುವುದು. ಹುಲ್ಲು, ಸೊಪ್ಪು ತರುವುದು, ಹೊಲದ ಕೆಲಸದ ಜೊತೆಗೆ ಮನೆಯಲ್ಲಿ ಹುಳುಗಳನ್ನು ಸಾಕುವುದು. ಇಟ್ಟ ಮಡುವಿನ ಜಯಮ್ಮ "ಇದೊಂದೆ ಕೆಲಸವನ್ನು ಮಾಡಿಕೊಂಡು ಕುಳಿತರೆ ಆಗುತ್ತದೆಯೋ, ಕಳೆ ತೆಗೆಯಲು ಹೋಗಬೇಕು, ನಾಟಿ ಸಮಯದಲ್ಲಿ ಹೊಲಕ್ಕೆ ಹೋಗಬೇಕು. ಕಣದ ಕೆಲಸ ಮಾಡಬೇಕು, ಕೆಲಸ ಮಾಡುವವರಿಗೆ ಊಟ ತೆಗೆದುಕೊಂಡು ಹೋಗ್ಬೇಕು; ಹೀಗೆ ಕೆಲಸದ

ಪಟ್ಟಿಯನ್ನೇ ಉಸಿರು ಬಿಗಿ ಹಿಡಿದಂತೆ ಹೇಳುತ್ತಾ ಹೋಗುತ್ತಾಳೆ. ಮನೆಯಲ್ಲಿ, ಹೊಲದಲ್ಲಿ, ಹೀಗೆ ಎಲ್ಲೆಲ್ಲಿ ಅಗತ್ಯವಿದೆಯೋ ಅಲ್ಲಲ್ಲಿ ಜಯಮ್ಮ ಸಾಧ್ಯವಾದ ಎಲ್ಲಾ ಕೆಲಸಗಳನ್ನು ಮಾಡುತ್ತಾಳೆ. ಯಾವ ಬೆಳೆ ಇಡಬೇಕು. ಯಾವ ಗೊಬ್ಬರ ಹಾಕಬೇಕು, ಎಷ್ಟು ಮೊಟ್ಟೆ ತರಬೇಕು. ಯಾವುದರಲ್ಲೂ ಈಕೆ ನಿರ್ಣಾಯಕ ಪಾತ್ರವನ್ನು ವಹಿಸುವುದಿಲ್ಲ.

ರೇಶ್ಮೆ ಗೂಡನ್ನು ಮಾರಾಟ ಮಾಡಿ ಬಂದ ಯಜಮಾನರನ್ನು, 'ಎಷ್ಟಾಯ್ತು'? ಎಂದು ಕೇಳಿದರೆ ಅದೆಲ್ಲಾ ನಿನಗ್ಯಾಕೆ ಅಂತ ಕೇಳುತ್ತಾರೆ ಎಂದು ವೆಂಕಟಮ್ಮ ನುಡಿಯುತ್ತಾಳೆ. ತಂದಿರುವ ದುಡ್ಡನ್ನು ಮನೆಗೆ ಖರ್ಚು ಮಾಡುತ್ತಾರೆ. ಆದರೆ ನನಗೆ ಎಷ್ಟಾಯ್ತು ಅಂತ ಹೇಳುವುದಿಲ್ಲ. ಕೆಲಸ ಮಾಡುವುದು ನಾವು, ದುಡ್ಡು ತೆಗೆದುಕೊಳ್ಳುವವರು ಅವರು ಎಂದು ನಗೆಯಾಡುತ್ತಾರೆ. ಎಂ. ಜಿ. ಪಾಳ್ಯದ ಮುನಿಗಂಗಮ್ಮನ ಮನೆಯಲ್ಲಿ ಇಬ್ಬರು ಹೆಣ್ಣು ಮಕ್ಕಳಲ್ಲಿ, ಒಬ್ಬರು ಮನೆಯಲ್ಲಿದ್ದು ಮನೆಗೆಲಸ ಮಾಡಿ, ಹೊಲದ ಕೆಲಸ ಮಾಡುವವರಿಗೆ ಅಡಿಗೆ ಮಾಡಿಕೊಟ್ಟು ಕಳಿಸಿದರೆ, ತಾಯಿ, ಇನ್ನೊಬ್ಬ ಮಗಳು ಹುಳುವಿನ ಕೆಲಸ ಮಾಡುತ್ತಾರೆ.

ರೇಶ್ಮೆ ಕೃಷಿ ಗ್ರಾಮೀಣ ಜನರ ಆರ್ಥಿಕ ಸ್ಥಿತಿಯನ್ನು ತೀವ್ರಗತಿಯಲ್ಲಿ ಉತ್ತಮಗೊಳಿಸಿದ್ದನ್ನು ಸುಲಭವಾಗಿ ಕಾಣಬಹುದು. ಇತರ ಎಲ್ಲಾ ಪದಾರ್ಥಗಳನ್ನು ಬಿಟ್ಟು ರೈತರು ರೇಶ್ಮೆಯ ಬೆಳೆಗೆ ಅವಲಂಬಿತರಾದರು. ಈ ಎಲ್ಲಾ ಶ್ರಮಶಕ್ತಿಯ ಹಿಂದೆ ಇರುವವರು ಮಹಿಳೆಯರು. ಆದರೆ ಇಲ್ಲಿ ಮಹಿಳೆಯರ ಶ್ರಮ ಅಗೋಚರ. ಒಟ್ಟಾರೆಯಾಗಿ ಕುಟುಂಬದ ಆರ್ಥಿಕ ಸ್ಥಿತಿ ಸುಧಾರಿಸುವುದು ಕಂಡುಬಂದರೂ, ಸ್ತ್ರೀಯರ ಸ್ಥಾನಮಾನದ ಬದಲಾವಣೆಯಲ್ಲಿ ಯಾವುದೇ ಬದಲಾವಣೆಯನ್ನು ಉಂಟುಮಾಡಿಲ್ಲ. ಸ್ತ್ರೀಯರ ಹೊರೆಯನ್ನು ಹೆಚ್ಚಿಸಿರುವುದನ್ನು ಮಾತ್ರ ಬಿಟ್ಟರೆ ನುಡಿತದ ನೇರವಾದ ಫಲವನ್ನು ಕಾಣುವ ಸ್ತ್ರೀಯರು ಗ್ರಾಮದಲ್ಲಿ ಅಪರೂಪವೆಂದೇ ಹೇಳಬಹುದು.

ರೇಶ್ಮೆಯಂತಹ ವಾಣಿಜ್ಯ ಕೃಷಿ ಸ್ತ್ರೀಯರನ್ನು ಕೇವಲ ದುಡಿಯುವ ಯಂತ್ರವನ್ನಾಗಿಸುತ್ತಿದೆ. ಅಗತ್ಯವಾದ ಅಪಾರ ಶ್ರಮವನ್ನು ಕುಟುಂಬದ ಚೌಕಟ್ಟಿನಲ್ಲಿ ಖಚಿತವಾಗಿ ಪಡೆಯುವ ಈ ವಾಣಿಜ್ಯ ಕೃಷಿ. ಅದರ ಫಲದಿಂದ ಸ್ತ್ರೀಯರು ವಂಚಿತರಾಗುತ್ತಾರೆ. ಹೊರಗಡೆ ತೆಗೆದುಕೊಂಡು ಹೋಗಿ ಮಾರಾಟ ಮಾಡುವುದು 'ಗಂಡಸರಿಗೆ ಸುಲಭ' ವಾಗಿರುವುದರಿಂದ ಅದು ಸಹಜವಾಗಿ ಪುರುಷರ ಕೆಲಸ. ಈಗಾಗಲೇ ಕೌಟುಂಬಿಕ ಹೊರೆಯಿಂದ ಮನೆಗೆ ಸೀಮಿತವಾದ ಮಹಿಳೆಯರನ್ನೂ ಇನ್ನೂ ಹೆಚ್ಚು ಹೆಚ್ಚು ಕೌಟುಂಬಿಕ ಜೀವನದಲ್ಲಿ ಬಂಧಿಸುತ್ತದೆ.

ಆಧುನಿಕ ತಂತ್ರಜ್ಞಾನ, ವಾಣಿಜ್ಯ ಬೆಳೆ, ಮೂಲವ್ಯವಸ್ಥಿತ ಸ್ವರೂಪ, ನಿಯಂತ್ರಣ ಮುಂತಾದವುಗಳ ಒಡಲಲ್ಲಿಯೇ ಗ್ರಾಮೀಣ ಸ್ತ್ರೀಯರನ್ನೂ ಶೋಷಿಸುವ ಅಂಶಗಳಿವೆಯೋ ? ಈ ಪ್ರಶ್ನೆಗೆ ಉತ್ತರವನ್ನು ನೀಡುವುದು ಸುಲಭ ಸಾಧ್ಯವಲ್ಲವಾದರೂ, ಅತಿರೇಕಗಳಿಗೆ ಕೊಂಡೊಯ್ಯುವ ಚರ್ಚೆಗಳನ್ನು ಇಂದು ನಾವು ಕಾಣುತ್ತಿದ್ದೇವೆ. ಈ ಮೇಲಿನ ಅಂಶಗಳು ನಮ್ಮ ಗ್ರಾಮೀಣ ಪರಿಸರಕ್ಕೆ, ಸಾಮಾಜಿಕ ಸನ್ನಿವೇಶಗಳಿಗೆ ಪೂರಿತವಾಗಿದೆಯೇ ಅಥವಾ ಇಲ್ಲವೆ ಎಂಬ ಅಂಶವನ್ನು ಮೂಲಭೂತವಾಗಿ ನಾವು ಚರ್ಚಿಸುವ ಅಗತ್ಯವಿದೆ. ಇದು ಸಮಗ್ರತೆಯ ದೃಷ್ಟಿಕೋನದ ಕೊರತೆಯನ್ನು ಎತ್ತಿ ತೋರಿಸುತ್ತದೆ.

ಮಹಿಳೆಯರ ಆರ್ಥಿಕ ಜೀವನದ ಮೇಲೆ ಪ್ರತಿಕೂಲ ಪರಿಣಾಮಗಳನ್ನು ಬೀರುವ ಇವುಗಳನ್ನು ಒಟ್ಟಾರೆಯಾಗಿ ತಿರಸ್ಕರಿಸಬೇಕೆ ? ಅಥವಾ ಗ್ರಾಮೀಣ ಸ್ತ್ರೀಯರ ಶ್ರಮಶಕ್ತಿಯನ್ನು ಗುರುತಿಸುವಂತಹ, ಫಲ ನೀಡುವಂತಹ, ಸ್ತ್ರೀ ಸಮುದಾಯವನ್ನು ಒಳಗೊಳ್ಳುವಂತ ಸರಳ ಪ್ರಕ್ರಿಯೆಯ ಯೋಜನೆಗಳನ್ನು ರೂಪಿಸಬೇಕೇ ? ಈ ಪ್ರಕ್ರಿಯೆಯಲ್ಲಿ, ಒಟ್ಟಾರೆಯಾಗಿ ಸ್ತ್ರೀ ಪುರುಷರಿಬ್ಬರ ಮೇಲೆ ಬೀರುವ ಪ್ರತಿಕೂಲ ಪರಿಣಾಮಗಳನ್ನು ಯೋಚಿಸುವುದರ ಜೊತೆಯಲ್ಲಿಯೇ, ಸ್ತ್ರೀಯರ ಸ್ಥಿತಿ ಗತಿಗಳ ಬಗ್ಗೆ ವಿಶಿಷ್ಟ ಒತ್ತು ನೀಡಬೇಕೆ ? ಸ್ಥಿತ್ಯಂತರ ಪ್ರಕ್ರಿಯೆಯಲ್ಲಿ ಮೂಲೆಗುಂಪಾಗುವ ಸ್ತ್ರೀಯರ ಸ್ಥಿತಿಗತಿ, ಅದಕ್ಕೆ ಪೂರಕವಾದ ಅಂಶಗಳನ್ನು ಗಮನಿಸುವಾಗ ಈ ಪ್ರಶ್ನೆಗಳಿಗೆ ಸ್ಪಷ್ಟವಾದ ಉತ್ತರವನ್ನು ಕಂಡುಕೊಳ್ಳುವ ಸವಾಲು ನಮ್ಮ ಮುಂದಿದೆ.



# ಸಾಕ್ಷರತಾ ಆಂದೋಲನ ಮತ್ತು ಮಹಿಳೆ

* ಹುಟ್ಟಿನಿಂದಲೇ 'ಹೆಣ್ಣು' ವರ್ಗೀಕರಿಸಲ್ಪಟ್ಟು, ನಿರ್ಧರಿಸಲ್ಪಟ್ಟ ಪರಿಧಿಯೊಳಗೇ ಬೆಳೆದು ಬಂದಿರುವ,
* ಸಾಮಾಜಿಕ ನೀತಿ – ನಿಯಮುಗಳ ಕಟ್ಟುಪಾಡುಗಳೊಳಗೆ ಇದಕ್ಕೆ ಹೊರತಾಗಿ ಕನಸು ಕಾಣುವುದಕ್ಕೆ ಸಾಧ್ಯವಾದ,
* ತಮ್ಮೊಳಗಿರುವ ಶಕ್ತಿಯ ಪರಿಚಯವಾಗುವುದಕ್ಕೆ ಎಡೆ ಸಿಗದೆ,
* ದೈನಂದಿನ ಬದುಕಿನ ಏನನ್ನೂ ನಿರ್ಧರಿಸುವ ಹಕ್ಕಿಲ್ಲದೆ, ಸದಾ ಇತರರ ನಿರ್ಧಾರಗಳಿಗೆ, ಯೋಚನೆಗಳಿಗೆ ತಲೆಬಾಗಬೇಕಾಗಿರುವ,
* ಸರಕಾರದ ಒಂದಷ್ಟು ಕಾರ್ಯಕ್ರಮುಗಳಿಗೆ ಫಲಾನುಭವಿಯಾಗಿ ಅಂಕಿ - ಅಂಶದೊಳಗೆ ಸೇರಿ ಕೊಳ್ಳುವ,

ಸಾಮಾಜಿಕ ಆಗು - ಹೋಗುಗಳಲ್ಲಿ ಸಂಬಂಧವಿಡಲು ಯೋಗ್ಯಳಲ್ಲವೆನಿಸಿಕೊಂಡ ಮಹಿಳೆಯರ ಬದುಕಿಗೆ 'ಸಾಕ್ಷರತೆ' ಏನನ್ನು ತಂದೀತು? ಅವಳ ಬದುಕಿನ ಪರಿಸ್ಥಿತಿಯನ್ನು ಯಾವುದಾದರೂ ರೀತಿಯಲ್ಲಿ ತಟ್ಟೀತೇ?

ಎಷ್ಟೋ ಸಾರಿ ಮಹಿಳೆಯರೇ ಈ ಪ್ರಶ್ನೆಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಕೇಳಿದ್ದಾರೆ....

ಓದು-ಬರಹ ಕಲಿತರೆ ನಾಳೆಯಿಂದ ಕೂಲಿ ಹೆಚ್ಚಾಗುವುದೇ ?

ನೀರು ಮನೆಯ ಬಾಗಿಲಿಗೆ ಬರುವುದೇ ?

ಗಂಡ ಕುಡಿದು ಬಂದು ಹೊಡೆಯುವುದು ನಿಲ್ಲುವುದೇ?

ಸರಕಾರ ಕೆಲಸ ಕೊಡುವುದೇ ?

25 ವರುಷಗಳ ಹಿಂದೆಯೇ ಕಲಿತಾಗಿತ್ತು ಏನಾಗಿದೆ ಈಗ ?

ಏನೂ ಇಲ್ಲ. ಇವು ಯಾವುವೂ ಸಾಕ್ಷರತೆಯೊಂದಿಗೆ ಬದಲಾಗುವುದಿಲ್ಲ. ಹಾಗಿದ್ದದ್ದರೆ, ಈಗಾಗಲೇ ಸಾಕ್ಷರರಾಗಿರುವ ಮಧ್ಯಮ : ಮೇಲ್ವರ್ಗದ ಮಹಿಳೆಯರು ಎಲ್ಲಾ ಬಂಧನಗಳಿಂದ ವಿಮುಕ್ತರಾಗಬೇಕಾಗಿತ್ತು. ಮೂರು ಹೊತ್ತಿನ ನಿಶ್ಚಿಂತೆಯ ಊಟ, ಮನೆಯೊಳಗೇ ಬಂದಿಳಿವ ನೀರು, ಸಾಕಷ್ಟು ಮಾಹಿತಿ ಕೊಡುವ ಪತ್ರಿಕೆ, ರೇಡಿಯೋ, ಟಿ.ವಿ.ಗಳ ವ್ಯವಸ್ಥೆ, ಸುಲಭ ಅಡುಗೆ ಸಾಧನಗಳು ಯಾವ ರೀತಿ ಮಹಿಳೆಯ ಬದುಕಿನ ತೊಳಲಾಟವನ್ನು ಬದಲಾಯಿಸಿಲ್ಲವೋ ಅದೇ ರೀತಿ ಸಾಕ್ಷರತೆ ಕೂಡಾ ಅವರ ಬದುಕಿನ ರೀತಿ - ನೀತಿಗಳನ್ನು ಬದಲಾಯಿಸಿಲ್ಲ. ಇವು ಯಾವುವೂ ಅವಳಲ್ಲಿ ಬದಲಾವಣೆಗೆ ಹೊತ್ತಿಸಬೇಕಾದ ಕಿಚ್ಚು ಹೊತ್ತಿಸಿಲ್ಲ.

● **ವಾಣಿ**

(ನಾಟ್ಯ ಸಂಪನ್ಮೂಲ ಕೇಂದ್ರ ಮೈಸೂರು ಸಂಯೋಜಿಸಿದ- ಸಾಹಿತಿಗಳ ಸಮಾವೇಶದಲ್ಲಿ–ಮಂಡಿಸಿದ ಲೇಖನ)

## 'ಸಾಕ್ಷರತೆ ಆಂದೋಲನವಾದಾಗ'

ಹಾಗಾದರೆ 'ಸಾಕ್ಷರತೆಗೋಸ್ಕರ' ಇಷ್ಟು ಶ್ರಮ, ಹಣ, ಪ್ರಯತ್ನ ಯಾಕೆ ಹಾಕಬೇಕು ? ಹತ್ತಿರದಿಂದ ನೋಡಿದರೆ, ಬಡ ಹೆಂಗಸರದ್ದೇ ಪ್ರತಿಕ್ರಿಯೆಗಳನ್ನು

ಅರ್ಥಮಾಡಿಕೊಂಡರೆ, ಇದರ ಇನ್ನೊಂದು ಮುಖ ಕಂಡುಬರುತ್ತದೆ. ಸಾಧಾರಣವಾಗಿ ಹೆಂಗಸರೊಂದಿಗೆ ಮಾತುಕತೆ ಆಡುವಾಗ ಅವರು 'ಸಾಕ್ಷರತೆ' ಬೇಡ ಎಂದು ಹೇಳಿ ತಿರಸ್ಕರಿಸುವುದಿಲ್ಲ. 'ತಮ್ಮಿಂದ ಸಾಧ್ಯವಿಲ್ಲ' ಎಂದು ಸೂಚಿಸುತ್ತಾರೆ. 'ತಮಗೆ ಸಮಯವಿಲ್ಲ' ಎಂದು ಹೇಳುತ್ತಾರೆ. 'ಓದಿದವರು, ತಿಳಿದವರು, ಬುದ್ಧಿವಂತರು ಎಂಬ ಕಲ್ಪನೆ ಅವರಲ್ಲಿದೆ, ನೇರವಾಗಿ ಬದುಕಿಗೆ ಉಪಯೋಗವಾಗುತ್ತದೆ ಎಂಬ ಭಾವನೆಯಿಲ್ಲದೇ ಹೋದರೂ ತಮಗದು ನಿಲುಕದ ವಸ್ತು ಎಂಬ ಭಾವನೆಯೂ ಇದೆ. ಹೀಗೆ ನೋಡಿದರೆ ಒಂದು ಅಂಶದ ಸಾಧ್ಯತೆ ಕಾಣಿಸುತ್ತದೆ. 'ಸಾಕ್ಷರತೆ' ಸಶಕ್ತತೆ ತರಲಾರದಾದರೂ, ಸಾಕ್ಷರತೆಯನ್ನು ಪಡೆಯುವ ಪ್ರಕ್ರಿಯೆಯೇ ಒಂದು ಸಶಕ್ತ ಅನುಭವ ತರಬಲ್ಲುದು. ನಿಲುಕದ ಒಂದು ವಸ್ತುವನ್ನು ಯಾರದ್ದೋ ಕೆಲವೇ ಕೆಲವರ ಸೊತ್ತು ಎನಿಸಿಕೊಂಡ ವಸ್ತುವನ್ನು ಪಡೆಯಲು ಹೊರಟ ಪಡೆಯುವ, ಪಡೆದ ಭಾವನೆ ಸಶಕ್ತತೆಯ ಭಾವನೆ ತರಬಲ್ಲುದು. ಇಲ್ಲಿ ಅನುಭವವಾಗುವ ಶಕ್ತಿ ಮೆತ್ತಗೆ ಬೇರೆ ಸಂಕಲೆಗಳನ್ನು ಸಡಿಲಿಸುವ ಕಲ್ಪನೆ ಹುಟ್ಟಿಸಬಲ್ಲುದು, ಅಥವಾ ಇದೇ ಶಕ್ತಿಯು ಕಿಡಿ ಕಾಳ್ಗಿಚ್ಚಿನಂತೆ ಹರಡಲೂ ಬಹುದು.

ಸಾಕ್ಷರತೆ-ಅದರ ಪಾಡಿಗೆ ಅದು ಒಂದು ತಂತ್ರ, ಸಾಧನೆ ಅಥವಾ ಒಂದು ಕೌಶಲ್ಯ ಅಷ್ಟೆ. ಆದರೆ ಅದನ್ನು ಪಡೆಯುವ ಪ್ರಕ್ರಿಯೆಯೇ ಒಂದು ಚಳುವಳಿಯಾದಾಗ ಅದು ಜೀವದೊಳಗೆ ಹುದುಗಿರುವ ಶಕ್ತಿಯನ್ನು ಬಡಿದೆಬ್ಬಿಸುತ್ತದೆ. ಅಂತೆಯೇ, ಸಾಕ್ಷರತೆಯನ್ನು ಪಡೆಯುವುದು ಜನರ ಒಂದು ಪ್ರಜ್ಞಾಪೂರ್ವಕ ಬೇಡಿಕೆಯಾದಾಗ, ಒಂದು ಹೋರಾಟವಾದಾಗ ಅದು ಒಂದು ಸಶಕ್ತ ಅನುಭವ ಕೊಡುವುದು ಸಾಧ್ಯ; ಸಾಕ್ಷರತೆಗಿಲ್ಲದ ಶಕ್ತಿ ಈ ಹೋರಾಟಕ್ಕೆ, ವ್ಯಕ್ತಿಗಳೊಳಗಿಂದ ಪ್ರಾರಂಭವಾಗಿ ಸಮೂಹವಾಗಿ ಬೆಳೆದು ನಿಲ್ಲುವ ಆಂದೋಲನಕ್ಕೆ ಇದೆ. ಇದಕ್ಕಿರುವ ಸಾಧ್ಯತೆ ಮಾತ್ರ ಅಗಾಧ.

**ಅಸಹಜ ಆಂದೋಲನ**

ಆಂದೋಲನ ಒಂದು ಕ್ಷಣ ಸಾಮೂಹಿಕ ವ್ಯವಸ್ಥೆಯನ್ನು ಕದಲಿಸುವುದು ಸತ್ಯ. ಆದರೆ, ಸಾಕ್ಷರತಾ ಆಂದೋಲನ 'ಒಂದು ಸಹಜವಾಗಿ ಹುಟ್ಟಿಬಂದ ಆಂದೋಲನವೇ ? ಈ ಆಂದೋಲನ ಯಾಕೆ, ಎಲ್ಲಿಂದ ಹುಟ್ಟಿಕೊಂಡಿದೆ? ಯಾರ ಮೇಲೆ ಅವಲಂಬಿಸಿದೆ ? ಎನ್ನುವುದೇ ದೊಡ್ಡ ವಿಪರ್ಯಾಸ. ಇದೊಂದು ಕೃತಕ ಆಂದೋಲನ. ಸರಕಾರ ಸೃಷ್ಟಿಸಿದ ಆಂದೋಲನ. ಸರಕಾರ ಸ್ವಯಂ ಸೇವಾ ಶಕ್ತಿಗಳನ್ನು ಬಳಸಿಕೊಂಡು ಹಾಕಿಕೊಂಡ ಆಂದೋಲನ. ಎಲ್ಲಿ ಪ್ರಾಮಾಣಿಕ, ದಕ್ಷ ಅಧಿಕಾರಿ, ಜೊತೆಗೊಂದಿಷ್ಟು ಉತ್ಸಾಹದಿಂದ ಕೆಲಸ ಮಾಡುವವರು ಸೇರಿಕೊಂಡಿದ್ದಾರೋ ಅಲ್ಲಿ ಆಂದೋಲನಕ್ಕೊಂದು ಒಳ್ಳೆಯ ಕಾರ್ಯಕ್ರಮದ ರೂಪವಾದರೂ ಸಿಕ್ಕಿತು. ಇಲ್ಲಾ, ಅದು ಕೇವಲ ಕೆಲವರ ಪ್ರತಿಷ್ಠೆಯ ಪ್ರಶ್ನೆಯಾಯಿತು. ಸಂಪೂರ್ಣ ಸಾಕ್ಷರತಾ ಜಿಲ್ಲೆ ಎಂದು ಘೋಷಿಸುವುದೇ ಮುಖ್ಯವಾಯಿತು. ಒಂದಿಷ್ಟು ಕಡೆ 'ಬಲಾತ್ಕಾರದ ಆಂದೋಲನ' ಒತ್ತಡದ ಮೇಲೆ ಒತ್ತಡ. ಪಕ್ಕಾ ಮೇಲಿನಿಂದ ಕೆಳಗೆ ಅಧಿಕಾರದ ಕೆಳಗೆ ಅಧಿಕಾರದ ನೆಲೆಯ ಒತ್ತಡ. ಕೊನೆಗೆ, ಕಲಿಕಾ ಕೇಂದ್ರಕ್ಕೆ ಬಾರದೇ ಹೋದರೆ ರೇಶನ್ ಕಾರ್ಡ್ ಕೊಡುವುದಿಲ್ಲ ಎಂದು ಹೆದರಿಸಿ ತರುವ ಒತ್ತಡ. ಇದನ್ನೂ ಆಂದೋಲನ ಅಂತ ಹೇಗೆ ಕರೆಯಲು ಸಾಧ್ಯ ? ಇಲ್ಲಿ ಆಂದೋಲನ ಚಿಗುರುವ ಮೊದಲೇ ಮುರುಟಿ ಹೋಗುತ್ತದೆ. ಆಂದೋಲನ ಸ್ವಲ್ಪಮಟ್ಟಿಗೆ ಸರಾಗವಾಗಿ ನಡೆದಲ್ಲಿ ಕೂಡಾ ಹಿನ್ನೆಲೆಯಲ್ಲಿ ನಿಂತಿರುವ ವ್ಯಕ್ತಿಗಳ 'ಅಹಂ' — 'ಅಹಂ'ಗಳ ತಿಕ್ಕಾಟಗಳನ್ನು ನೋಡುವಾಗ ಇದು ಹೇಗೆ ಆಂದೋಲನವಾದೀತು ಎಂಬ ಪ್ರಶ್ನೆ ಬರುತ್ತದೆ.

ಇಷ್ಟೇ ಅಲ್ಲ ಮಹಿಳಾ ಚಳವಳಿಗಳಲ್ಲಿ ತೊಡಗಿರುವ ಸ್ನೇಹಿತೆಯರೊಬ್ಬರು, ಈ ಆಂದೋಲನದ ಬಗ್ಗೆ ಅನುಮಾನ ವ್ಯಕ್ತಪಡಿಸುತ್ತಾ, "........ಒಂದು ಅಂಶದ ಬಗ್ಗೆ ನಾವೆಲ್ಲಾ ಎಚ್ಚರಿಕೆಯಿಂದಲೇ ನೋಡಬೇಕೆನಿಸುತ್ತಿದೆ. ಎಂಟ್ರಿ ಪಾಯಿಂಟ್ ಆಗಿ ಇಂತಹ ಯೋಜನೆಗಳು ಪೂರಕವಾಗಿ ಕೆಲಸ ಮಾಡಬಹುದು. ಆದರೆ ಇದು ಕಾನ್‌ಸ್ಟಂಟ್ ಆಗಿ ಇರಲು ಸಾಧ್ಯವೇ ? ಇಂತಹ ಯೋಜನೆಗಳನ್ನು ಕಾನ್‌ಸ್ಟಂಟ್ ಆಗಿ ಇರಲು ಸರಕಾರಗಳು ಬಿಡುತ್ತವೆಯೆ ? ಎಂಬ ಪ್ರಶ್ನೆ ನನ್ನನ್ನು ಕಾಡುತ್ತದೆ. ಜೊತೆಗೆ, ಇಂತಹ 'ವಿಷಯ'ಗಳನ್ನು ಅಧಿಕಾರಿಶಾಹಿ ವರ್ಗ ಹಾಗೂ ಸರಕಾರಗಳು ಸುಲಭವಾಗಿ ಎನ್‌ಕ್ಯಾಶ್ ಮಾಡಿಕೊಂಡು ಬಿಡಬಹುದಲ್ಲವೇ ? ಇದರ

ಜೊತೆಗೆ ಜನಪರ ಚಳುವಳಿಗಳು ಇಲ್ಲದಿರುವಂತ ಸ್ಥಿತಿಯಲ್ಲಿ ಇಂತಹ ಚಳವಳಿಗಳು, ಕೆಲವೊಮ್ಮೆ ಕಣ್ಣಿಗೆ ಕಾಡುವಂತಹ 'ಪ್ರಚಾರ ನಡೆಸುವುದು' ಅಥವಾ ಹಾಗೆ ಕಾಣುವುದು ಸಹಜವಲ್ಲವೇ ? ಹಾಗೆಂದ ಮಾತ್ರಕ್ಕೆ ಇಂತಹ ಯೋಚನೆಗಳು ಬೇಡವೆಂಬ ಅರ್ಥ ಖಂಡಿತಾ ಅಲ್ಲ......" ಎಂದು ಹೇಳುತ್ತಾರೆ. ಬಹುಶಃ ಬಹಳ ಪ್ರಜ್ಞಾಪೂರ್ವಕವಾಗಿ ಇದನ್ನು ಗಮನದಲ್ಲಿಡುವುದು ನಮ್ಮ ನಿಲುವುಗಳನ್ನು ಸ್ಪಷ್ಟಪಡಿಸಕೊಳ್ಳುವುದೂ ತುಂಬಾ ಅಗತ್ಯವೆನಿಸುತ್ತದೆ.

**"ಸಮಯ ಮತ್ತು ಅವಕಾಶ"**

ಮಹಿಳೆಯರಿಗೆ ಸಿಕ್ಕಿರುವುದು ನೇರವಾಗಿ ಸ್ಪಷ್ಟವಾಗಿ ಕಂಡು ಬರುವ ಒಂದು ಅಂಶ. ಈ ಸಮಯ ಮತ್ತು ಅವಕಾಶ. ಅಂದರೇನು ? ಇದನ್ನು ಕಟ್ಟಿಕೊಂಡು ಮಹಿಳೆಯರೇನು ಮಾಡುತ್ತಾರೆ ? ಮಹಿಳೆಯರ ಸುಪ್ತಶಕ್ತಿ ಬಗ್ಗೆ ನಂಬಿಕೆಯಿದ್ದರೆ ಈ ಸಮಯ ಮತ್ತು ಅವಕಾಶ ಅಂದರೇನು ? ಅದು ಹೇಗೆ ವ್ಯಕ್ತವಾಗುತ್ತದೆ, ಹೇಗೆ ಒಂದು ಕಾರ್ಯಂತ್ರವಾಗುತ್ತದೆ ಎಂಬುದು ತಾನೇ ತಾನಾಗಿ ಅರ್ಥವಾಗುತ್ತದೆ. ಸಾಕ್ಷರತಾ ಆಂದೋಲನ ಮಹಿಳೆಯರನ್ನು ಹತ್ತಿರದಿಂದ ತಲುಪಿ (ಹತ್ತಿರ ಹೋದಲ್ಲಿ ಮಾತ್ರ) ಅವರು ಜೊತೆ ಸೇರಲು ಒಂದಷ್ಟು ಸಮಯ-ಅವಕಾಶ ಕಲ್ಪಿಸಿದೆ. ಹಾಗಾದರೆ ಮಹಿಳೆಯರಿಗೆ ಸಮಯವೇ ಇಲ್ಲ, ಅಥವಾ ದಿನದಲ್ಲೂ ಎಷ್ಟೋ ಬಾರಿ ಸಮಯ ಉಳಿದಿರುತ್ತದೆ. ಆದರೆ, ಆ ಸಮಯ ಅವರದಾಗಿರುವುದಿಲ್ಲ. ಅವರ ಹಿಡಿತದಲ್ಲಿರುವುದಿಲ್ಲ .... ಇತರರ ಅಥವಾ ಪರಿಸ್ಥಿತಿಯ ನಿರ್ಧಾರದಂತೆ ಅವರದನ್ನು ಕಳೆಯುತ್ತಾರೆಯೇ ಹೊರತು ಎಂದೂ ಅವರದಾಗಿ ಕಳೆದಿರುವುದಿಲ್ಲ.

ಅದೇ ರೀತಿ ಹೆಂಗಸರು ಜೊತೆ ಸೇರುವುದಿಲ್ಲವೇ, ಮದುವೆ ಸಮಾರಂಭಗಳಲ್ಲಿ, ಬಾವಿ ಕಟ್ಟೆಗಳಲ್ಲಿ, ಗದ್ದೆ ಕೂಲಿ ಕೆಲಸಗಳಲ್ಲಿ....ಮಾತಾಡುವುದಿಲ್ಲವೇ ? ಮಾತಾಡುತ್ತಾರೆ, ಹರಟುತ್ತಾರೆ.... ಸುಖ-ದುಃಖ ಹೇಳಿಕೊಳ್ಳುತ್ತಾರೆ. ನಗುತ್ತಾರೆ.... ಛೇಡಿಸಿಕೊಳ್ಳುತ್ತಾರೆ.... ಅಲ್ಲಿಗೇ ನಿಲ್ಲುತ್ತದೆ. ಇದು ಬಿಟ್ಟರೆ ಸರಕಾರೀ ಕಾರ್ಯಕ್ರಮಗಳಲ್ಲಿ 'ಫಲಾನುಭವಿ'ಗಳಾಗಿ ಸೇರುತ್ತಾರೆ, ಕೊಟ್ಟಿದ್ದನ್ನು ಸ್ವೀಕರಿಸುವ.... ಸ್ವೀಕರಿಸಬೇಕಾದ ಪ್ರಾಣಿಗಳಾಗಿ.... ಯೋಚಿಸಬೇಕಾದ ಜೀವಿಗಳಾಗಿ ಅಲ್ಲ. ಆದುದರಿಂದ ಈ ಸಾಂಪ್ರದಾಯಿಕ, ರೂಢಿಗತ ಸಂದರ್ಭಗಳಿಗೆ ಹೊರತಾಗಿ ಅವರು ಸೇರುವುದು ಕೂಡಾ ಬಹಳ ಮುಖ್ಯವಾಗುತ್ತದೆ. ಸಾಂಪ್ರದಾಯಿಕ ಮೌಲ್ಯಗಳಿಗೆ ನಂಬಿಕೆಗಳಿಗೆ ಅನುಗುಣವಾಗಿಯೋ ಮಾತುಕತೆ ನಡೆಯುತ್ತವೆ. ಆದರೆ ಈ ಹೊಸ ನೆಲೆಯಲ್ಲಿ ಸೇರುವುದು ಒಂದು ರೀತಿ ಹೊಸ ಕ್ರಿಯೆಗಳತ್ತ ದಾರಿಮಾಡಿಕೊಡುತ್ತದೆ....ಯಾವ-ಯಾವುದೋ ವಿಚಾರಗಳ ಬೀಜಗಳು ಬಿತ್ತಲ್ಪಡುತ್ತವೆ. ಈ ಸೇರುವಿಕೆಯಲ್ಲಿ 'ಹೆಂಗಸರು' ತಾವು ಎಂಬ ಗುರುತಿದೆ. ಹೆಂಗಸರೆಂಬ ಮಹತ್ವವಿದೆ. ಕಲಿತುಬಿಡುತ್ತೇವೆ ಅನ್ನುವುದಕ್ಕಿಂತ ಹೆಚ್ಚಾಗಿ ಕಲಿಯಲು ತಾವು ಅರ್ಹರು ಎಂಬ ಅಭಿಮಾನವಿದೆ. ಇಂತಹ ಪರಿಸರವೇ ಕೆಲವೊಮ್ಮೆ ಬದಲಾವಣೆಯ ಕಿಡಿಗಳನ್ನು ಹತ್ತಿಸಿಬಿಡುತ್ತವೆ.

ಸಶಕ್ತರಾಗುವ ಸುಪ್ತ ಸಾಧ್ಯತೆ ಮಹಿಳೆಯರಲ್ಲಿ ಖಂಡಿತಾ ಇದೆ. ಆದರೆ, ಬದುಕಿನ ವಿಭಿನ್ನ ಏರುಪೇರುಗಳಲ್ಲಿ, ಅಲ್ಲಿ ಇಲ್ಲಿ ಕಮರಿಹೋಗಿರುತ್ತದೆ; ಅಥವಾ ವಿಕಲ್ಪಗೊಂಡಿರುತ್ತವೆ. ಮೃದುವಾಗಿ ತಟ್ಟಿದರೆ ಮತ್ತೆ ಜಾಗೃತವಾಗುತ್ತದೆ. ಈ ಹೊರಗಿನಿಂದ ತಟ್ಟುವ ಪ್ರಕ್ರಿಯೆ – ಬೇರೆ ಬೇರೆ ರೂಪದಲ್ಲಿರಬಹುದು. ಉದಾ : ಆಂಧ್ರದ ನೆಲ್ಲೂರಿನಲ್ಲಿ, ಸಾಕ್ಷರತೆಯ ಪ್ರಾಥಮಿಕ (ಪ್ರೈಮರ್)ದಲ್ಲಿದ್ದ ಪಾಠವೊಂದು ಮಹಿಳೆಯರನ್ನು ಕುಡಿತದ ವಿರುದ್ಧ ಬಡಿದೆಬ್ಬಿಸಿತು. ಬರುವ ಕೂಲಿಯನ್ನು ಕುಡಿತಕ್ಕೆ ಪೋಲು ಮಾಡುವ ಗಂಡಂದಿರ, ವ್ಯವಸ್ಥೆಯ ವಿರುದ್ಧ ಎದ್ದು ನಿಂತವು ಮಹಿಳಾ ಗುಂಪುಗಳು. ಈ ಮಹಿಳೆಯರು ಇಂದಿಗೂ ಸಂಪೂರ್ಣ ಸಾಕ್ಷರರಾಗಿದ್ದಾರೋ ಇಲ್ಲವೋ ನನಗೆ ಗೊತ್ತಿಲ್ಲ. ಆದರೆ, ಇಂತಹದೊಂದು ಸಾಧ್ಯತೆಯನ್ನು ಮಾಡಿ ತೋರಿಸಿದರು. ಅನುಸರಿಸಿಕೊಂಡು ಬಂತು ಕರ್ನೂಲಿನ ಚಳವಳಿ. ಮಹಿಳೆಯರು ಎದ್ದು ನಿಂತ ರೀತಿ, ಅವರ ಹೋರಾಟದ ತಂತ್ರಗಳನ್ನು ಗಮನಿಸಿದ ವರದಿಗಾರರೊಬ್ಬರು ಹೇಳುತ್ತಾರೆ, 'ಮಹಿಳೆಯರು ಹೋರಾಟಕ್ಕಿಳಿದರೆ ಅದು ಗಾಂಧಿಯನ್ನೂ ಆಗಿರೋದಿಲ್ಲ, ಮಾರ್ಕ್ಸ್‌ಯನ್ನೂ ಆಗಿರೋದಿಲ್ಲ. ಅದು ಮಹಿಳೆಯರದ್ದೇ ಸ್ವಂತದ್ದು ಆಗಿರುತ್ತದೆ' ಎಂದು. ಇದು ಮಹಿಳೆಯರಿಗೊಂದು ಹೆಗ್ಗಳಿಕೆಯೇ ಸರಿ. ಹೋರಾಡಬೇಕೆನಿಸಿದರೆ, ಹೋರಾಡುವ ದಾರಿಯನ್ನು ಅವರೇ ಹುಡುಕಿಕೊಳ್ಳುತ್ತಾರೆ. ಯಾರೋ ಎಲ್ಲೋ ಕುಳಿತು ಅದನ್ನು ಡಿಸೈನ್ ಮಾಡಿಕೊಡಬೇಕಾಗಿಲ್ಲ. ಸಣ್ಣ

ಪ್ರಮಾಣದಲ್ಲಾದರೂ, ಮೈಸೂರಿನ ಅಬ್ಬಳತಿ(ಪಿರಿಯಾಪಟ್ಟಣ)ಯಲ್ಲಿ ಕುಡಿತದ ವಿರುದ್ಧ ಮಹಿಳೆಯರು ಸಂಘಟಿತರಾದ ಅನುಭವ ಮಹತ್ವದ್ದೇ ಆಗಿದೆ.

ಆಗಬಹುದಾದ ಸಾಧ್ಯತೆ ನೋಡಿದರೆ ಮಾತ್ರ ಆಗಿರೋದು ಬಹಳ ಕಡಿಮೆ ಅನ್ನಿಸುತ್ತದೆ. ಆಂದೋಲನದ ಬರದಲ್ಲಿ ಸಿಗುವ ಸಮಯ-ಅವಕಾಶ-ಮಿಂಚಿನಂತೆ ಬಂದು ಇನ್ನೇನು ಮಹಿಳೆಯರು ಅದರ ಲಾಭ ಪಡೆಯುತ್ತಾರೆ ಅನ್ನುವಾಗ ಮಾಯವಾಗ ಬಿಡುತ್ತಿರುವುದು. ಹೌದೆ, ಆಂದೋಲನದ ಹಿಂದೆಯೇ ಅವರ ವೈಚಾರಿಕ ಬೆಳವಣಿಗೆಗೆ ಪೂರಕವಾದ ವಸ್ತುಗಳು, ವಾತಾವರಣ ಅವರಿಗೆ ಸಿಗಲಿದೆಯೆ ? ಅಧಿಕಾರಿಗಳು ಹಳ್ಳಿಗೆ ಹೋಗುವುದನ್ನು ಮುಂದುವರೆಸಲು ಯಾವುದಾದರೂ ವ್ಯವಸ್ಥೆಯಿದೆಯೇ ? ಇನ್ನೂ ತಲುಪದವರನ್ನು ತಲುಪುವುದಕ್ಕೆ ಏನಾದರೂ ಪ್ರಯತ್ನ ನಡೆಯುವುದೇ ? ಬಹಳಷ್ಟು ಪ್ರಶ್ನೆಗಳು ಕಾಡುತ್ತವೆ. ಎಲ್ಲಕ್ಕೂ ಹೆಚ್ಚಾಗಿ 'ಆಂದೋಲನ'ದಲ್ಲಿ ಮಹಿಳಾ ಪ್ರಜ್ಞೆ ಎಷ್ಟರ ಮಟ್ಟಿಗೆ ಇತ್ತು – ಇದೇನಾದರೂ ಸಾಮಾಜಿಕ ಬದಲಾವಣೆಗೆ ಪೂರಕವಾದ ರೀತಿಯಲ್ಲಿ ಕೆಲಸ ಮಾಡಿದೆಯೇ ಎಂಬ ಅನುಮಾನ ಇನ್ನೂ ಕಾಡುತ್ತದೆ. ಈ ಎಲ್ಲಾ ನಿಟ್ಟಿನಲ್ಲಿ ಇನ್ನೂ ಒಂದಷ್ಟು ಸಂಶೋಧನಾತ್ಮಕ ದೃಷ್ಟಿಕೋನ, ಇನ್ನೊಂದಷ್ಟು ಹುಡುಕಾಟ, ಪ್ರಯೋಗ ಮಾಡಲೇಬೇಕಾಗಿದೆ ಅನ್ನಿಸುತ್ತದೆ.

**ಮಹಿಳೆಯರು ಯಾಕೆ ಸಾಕ್ಷರರಾಗಬೇಕು ?**

ಸಾಕ್ಷರತೆಯಿಂದ ಅವರಿಗೇನು ಪ್ರಯೋಜನ—ಎಂದು ಸೂಚಿಸುವ ವಿಚಾರಗಳು ಎರಡು ವರ್ಗಕ್ಕೆ ಸೇರುತ್ತವೆ (ನಾನೇ ಮಾಡಿಕೊಂಡಿರುವಂತಹದು)

ಮೊದಲನೆಯದು :

ಮಹಿಳೆಯ ಸಮಾನ ಸ್ಥಾನ – ಮಾನಕ್ಕಾಗಿ, ಅಭಿವೃದ್ಧಿಗಾಗಿ, ನಿರ್ಧಾರಗಳಲ್ಲಿ ಭಾಗಿಯಾಗಿ ಬೆಳೆಯಲು, ವರದಕ್ಷಿಣೆ, ಬಾಲ್ಯವಿವಾಹ ವಿರೋಧಿಸಲು. ಸಮಾನ ವೇತನ ಪಡೆಯಲು, ಆತ್ಮಸ್ಥೈರ್ಯ ಮತ್ತು ವ್ಯಕ್ತಿತ್ವ ಉತ್ತಮಗೊಳ್ಳಲು, ಮಹಿಳೆ ಪ್ರಜ್ಞಾಪೂರ್ವಕವಾಗಿ ತನ್ನ ನಿತ್ಯ ಜೀವನದ ಸಂಕೋಲೆಗಳನ್ನು ಮೀರಲು 'ಓದು–ಬರಹದ ಸಾಮರ್ಥ್ಯ ಒಂದು ಪ್ರಥಮ ಹೆಜ್ಜೆ. ನಾಲ್ಕು ಗೋಡೆಗಳ ಮಧ್ಯೆ ಬಂಧಿಯಾದ ಮಹಿಳೆಗೆ ಪುಸ್ತಕವು ವೈವಿಧ್ಯಮಯ ಮತ್ತು ವಿಸ್ಮಯಕಾರೀ ಜಗತ್ತನ್ನೆ ತೆರೆಯುವುದು.

ಎರಡನೆಯದು :

ಮಕ್ಕಳ ಪಾಲನೆ – ಪೋಷಣೆಯಲ್ಲಿ ಮಹಿಳೆಯರ ಸಾಕ್ಷರತೆ ಮತ್ತು ಶಿಕ್ಷಣ ಅತ್ಯಂತ ಪ್ರಮುಖವಾದದ್ದು.

'ಓದು ಕಲಿತ ನಾರಿ ಸುಖ ಸಂಸಾರಕ್ಕೆ ದಾರಿ
ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ
'ಓದು ಕಲಿತ ನಾರಿ ಮನೆಗೆ ಉಪಕಾರಿ

ಅಕ್ಷರ ಜ್ಞಾನದಿಂದ ತಕ್ಷಣ ಉಂಟಾಗುವ ಲಾಭವೆಂದರೆ ಮಹಿಳೆಯರ ಆರೋಗ್ಯ ಸುಧಾರಣೆ ಹಾಗೂ ಅವಳ ಮಗುವಿನ ಪೋಷಣೆ. ಒಂದೇ ಸಾಮಾಜಿಕ–ಆರ್ಥಿಕ ಗುಂಪಿಗೆ ಸೇರಿದ ಅನಕ್ಷರಸ್ಥ ಮಹಿಳೆಯ ಮಕ್ಕಳಿಗಿಂತ ಅಕ್ಷರಸ್ಥ ಮಹಿಳೆಯ ಮಕ್ಕಳು ಬದುಕಿ ದೊಡ್ಡವರಾಗಿ ಬೆಳೆಯುವ ಅವಕಾಶಗಳು ಹೆಚ್ಚು ಎಂದು ವೈಜ್ಞಾನಿಕ ಅಧ್ಯಯನಗಳು ಸೂಚಿಸಿವೆ. ಮಹಿಳೆಯು ಗರ್ಭಿಣಿಯಾದಾಗ ಹಾಲೂಡುವಾಗ ತನ್ನ ಯೋಗಕ್ಷೇಮವನ್ನು ನೋಡಿ ಕೊಳ್ಳುವ ಸಾಮರ್ಥ್ಯ ಅಕ್ಷರಸ್ಥ ಮಹಿಳೆಗೆ ಹೆಚ್ಚು....

ಈ ಮೇಲಿನ ಎರಡು ವರ್ಗದ ಸಂದೇಶಗಳನ್ನು ಹತ್ತಿರದಿಂದ ಗಮನಿಸಿದರೆ ಎರಡನೆಯದಕ್ಕೆ ಸಿಗುವ 'ಒತ್ತು'–'ನಿಖರತೆ' ಮೊದಲನೆಯದಕ್ಕೆ ಸಿಗುವುದಿಲ್ಲವೆಂಬುದು ತಿಳಿದುಬರುತ್ತದೆ. ಮೊದಲನೆಯದು ಅಲ್ಲಿ ಇಲ್ಲಿ ಕ್ಷೀಣವಾಗಿ ಕೇಳಿಬಂದರೆ ಎರಡನೆಯದು ಬೀದಿ ಬೀದಿಯಲ್ಲಿ ಗುಂಯ್‌ಗುಟ್ಟುತ್ತದೆ. ಮಹಿಳೆಯರನ್ನು ನೇರವಾಗಿ ಆಕರ್ಷಿಸಲು ಮೊದಮೊದಲು ಇದೇ ವಿಧಾನ ಉತ್ತಮ ಎಂದು ಹೇಳಿದರೆ ಮಾತ್ರ ತುಂಬಾ ತಪ್ಪಾಗುತ್ತದೆ. ಒಂದು ವಿಚಾರವನ್ನು ತಿಳಿಯದೇ ಮಾಡುವುದಕ್ಕೂ, ಒಂದು ತಂತ್ರವಾಗಿ ಉಪಯೋಗಿಸುವುದಕ್ಕೂ ಬಹಳ ವ್ಯತ್ಯಾಸವಿದೆ. ಒಂದಂತೂ ಸತ್ಯ. ಈ ಮೇಲಿನ ಸಂದೇಶಗಳು ನೇರವಾಗಿ, ಸ್ಪಷ್ಟವಾಗಿ ಮಹಿಳೆಯರು ಉತ್ತಮ ತಾಯಿ, ಗೃಹಿಣಿ ಆಗಬೇಕು ಅನ್ನುವುದನ್ನು ಮಾತ್ರ ಸೂಚಿಸುತ್ತದೆ. ಪುರುಷರೂ ಈ ಬಗ್ಗೆ ಕಾಳಜಿವಹಿಸುವ ಅವಶ್ಯಕತೆ ಇದೆ, ಸಾಧ್ಯವೂ ಇದೆ ಎಂದು ಹೇಳುವುದಿಲ್ಲ. ಶತಮಾನಗಳ ಯೋಚನೆಯನ್ನೇ ಸಮಾಜದಲ್ಲಿ ಮತ್ತೆ ದೃಢಪಡಿಸುವುದಾದರೆ ಈ

ಸಾಕ್ಷರತೆ ಅವರಿಗೆ ಯಾಕೆ ಬೇಕು ? ಹಾಗೆಯೆ, 'ಮಹಿಳಾ ಸಮಾನತೆ' ಅನ್ನೋದು ಬಾಯಿಪಾಠ ಮಾಡಿದ ಭಾಷೆಯಂತೆ ಕಂಡು ಬರುತ್ತದೆ. ಅದರ ಸಂದೇಶ ಮಾತಿನಲ್ಲಿ ಬಂದರೆ ಸಾಕಾಗೋದಿಲ್ಲ ; ರಕ್ತ ದೊಳಗೆ ಸೇರಿಕೊಂಡು ಹೃದಯದಿಂದ ಹೊರ ಬರ ಬೇಕಾಗುತ್ತದೆ. ಆಗ ಮಾತ್ರ ಅದು ಮಾತಿಗೂ ಮೀರಿ ವ್ಯಕ್ತವಾಗುತ್ತದೆ. ರಕ್ತಗತವಾಗಿದ್ದುಕೊಂಡು ಬನ್ನಿರಣ್ಣಾ ಹೇಳೋದರ ಜೊತೆಗೆ ಬನ್ನಿರಕ್ಕಾ ಸೇರಿಸೋದಕ್ಕೂ, ಸುಮ್ಮಸುಮ್ಮನೇ 'ಅಣ್ಣಾ' ಇದ್ದಲ್ಲೆಲ್ಲಾ 'ಅಕ್ಕಾ' ಸೇರಿಸೋದಕ್ಕೂ ಸಾಕಷ್ಟು ವ್ಯತ್ಯಾಸ. (ಸಮಾನತೆ ಸಮಾನತೆ ಎಂದು ಹಾಡುತ್ತಾ ಸಾರುತ್ತಾ ಪಕ್ಕದಲ್ಲಿರುವ ಮಹಿಳಾ ಸಹೋದ್ಯೋಗಿಯನ್ನೇ ಸಮಾನವಾಗಿ ಕಾಣದೇ ಹೋಗುವ ಎಲ್ಲಾ ಸಾಧ್ಯತೆಯಿದೆ ?)

'ಸಾಕ್ಷರತೆ ಮತ್ತು ಮಹಿಳೆ'–ಗೆ ಸಂಬಂಧಿಸಿದಂತೆ ಕರ್ನಾಟಕದ ಬಹುತೇಕ ಜಿಲ್ಲೆಗಳ ಮಾರ್ಗ ಸೂಚಿಯಲ್ಲಿ ಪುನರಾವರ್ತನೆಗೊಂಡಿರುವುದು ನೋಡುವಾಗಲೇ ಹೇಗೆ ಇದೊಂದು ಯಾಂತ್ರಿಕ ಕ್ರಿಯೆಯಾಗಿದೆ ಅನ್ನುವುದು ಗೊತ್ತಾಗುತ್ತದೆ. ಬಹುಶಃ ಪ್ರತಿ ಜಿಲ್ಲೆಯಲ್ಲೂ ಇದಕ್ಕಾಗಿ ಒಂದಷ್ಟು ಮಹಿಳಾಪರಯೋಚಿಸುವವರನ್ನು (ಪುರುಷರೂ ಇರಬಹುದು) ಸೇರಿಸಿಕೊಂಡು ಆಯಾಯ ಪ್ರದೇಶಕ್ಕೆ ಪ್ರಸ್ತುತವಾದ ಯೋಚನೆಗೆಡೆ ಮಾಡುವಂತಹ ಲೇಖನ ತಯಾರಿಸಬಹುದಿತ್ತು. ಅದು ಹೆಚ್ಚು ಜೀವಂತಿಕೆ ಕೊಡ್ತಿತ್ತು. ಹೆಚ್ಚು ವ್ಯಕ್ತಿಗಳೊಳಗೆ ಈ ಸಂದೇಶ : ವಿಚಾರ ಸೇರಿಕೊಳ್ಳುತ್ತಿತ್ತು. ಏಕತಾನತೆ ಇರುತ್ತಿರಲಿಲ್ಲ.

**ಭ್ರಮೆ ಯಾಕೆ ?**

ಸಾಕ್ಷರತೆಯಿಂದ, ಇಲ್ಲದ್ದೆಲ್ಲಾ ಆಗುತ್ತದೆ ಎಂಬ ಭ್ರಮೆ ಯಾಕೆ ಸೃಷ್ಟಿಸಬೇಕು ? ಮಹಿಳೆಯರು ವಿಚಾರಗಳನ್ನು ಕಲಿಯುವಂತಹ ಬೇರೆ ಬೇರೆ ರೀತಿಗಳಿವೆ. ಸಂಘಟನಾ ಪ್ರಕ್ರಿಯೆಯಲ್ಲಿ ಮಹಿಳೆಯರು ಪ್ರಖರವಾಗಿ ಯೋಚಿಸಿ ದಂತಹ, ಸಾಮೂಹಿಕವಾಗಿ ಕಾರ್ಯ ಪ್ರವೃತ್ತರಾದಂತಹ ನೂರಾರು ಉದಾಹರಣೆಗಳಿವೆ. ನನ್ನ ನೂರಿನ್ನೂರು ಹಳ್ಳಿಗಳೊಂದಿಗಿನ ಸೀಮಿತ ಒಡನಾಟದಲ್ಲೇ ಅನಕ್ಷರಸ್ಥ ಮಹಿಳೆಯರ ಗುಂಪು ಪರಿಸರ ಪ್ರಜ್ಞೆ, ಆರೋಗ್ಯದ ಮಾಹಿತಿ ಪಡಕೊಂಡು ಆಚರಣೆಗೆ ತಂದಿರುವ ಸಾಕಷ್ಟು ಉದಾಹರಣೆಗಳಿವೆ :

* ರಸಾಯನಿಕ ಗೊಬ್ಬರ ಕೆಟ್ಟದ್ದು, ಪರಿಸರದ ಸಹಜ ಬೆಳವಣಿಗೆ ದೃಷ್ಟಿಯಿಂದ ಎಂದು ತಿಳಿದು ಬಂದಾಗ ನಂಜನಗೂಡಿನ ಮಹಿಳಾ ಗುಂಪು ಅದಕ್ಕೆ ಹೊರತಾಗಿ ಬೆಳೆದ ಬೀಜಗಳೇ ತಮ್ಮಲ್ಲಿಲ್ಲವೆಂದು ತಳಮಳ ಪಡುತ್ತಿದ್ದಾಗ, ಕೊಳ್ಳೇಗಾಲದ ಮಹಿಳಾ ಸಂಘ ದವರು ಅವರಿಗೆ ರಾಸಾಯನಿಕ ಗೊಬ್ಬರ ಹಾಕದೇ ಬೆಳೆದ ಅವರೆಬೀಜ ತಂದುಕೊಟ್ಟರು. (ಅಕ್ಷರಸ್ಥರೆಷ್ಟು ಮಂದಿ ರಾಸಾಯನಿಕ ಗೊಬ್ಬರದ ಬಗ್ಗೆ ಇಷ್ಟು ಯೋಚಿಸುತ್ತಾರೆ !)
* 'ಗಿಡಬೆಳೆಸಿ', 'ಮರಬೆಳೆಸಿ' ಎಂದು ನಮಗೆ ಯಾಕೆ ಹೇಳುತ್ತೀರಿ ? ಲಾರಿಗಟ್ಟಲೆ ಮರಕಡಿದುಕೊಂಡು (ಅಕ್ಷರಸ್ಥರೇ–ಅನಕ್ಷರಸ್ಥರೇ ?) ಹೋಗುತ್ತಾರಲ್ಲಾ– ಅವರನ್ನು ಕೇಳಿ ಎಂದು ಗಿರಿಜನ ಮಹಿಳೆಯೊಬ್ಬರು ಸಂಘದ ಚರ್ಚೆಯಲ್ಲಿ ಕೇಳಿದ್ದು....

ಇಂತಹವರೆದುರು ಹೋಗಿ ಸಾಕ್ಷರತೆಯಿಂದ ಬದಲಾವಣೆ ಬಗ್ಗೆ ಭಾಷಣ ಕೊಟ್ಟರೆ ಅವರು ನಂಬಬಹುದೇ ? ಸಾಕ್ಷರತೆಯಿಂದ ವಾಸ್ತವಿಕವಾಗಿ ಏನು ಸಾಧ್ಯ ಎಂದು ಹೇಳಿದರೆ ನಮಗೇ ಮರ್ಯಾದೆಯೇನೋ ? ಅದು ಯಾಕೆ ಅಂತ ಅವರನ್ನು ಕೇಳಿದರೆ, ಅವರೇ ಹೇಳುತ್ತಾರೆ, ಮಗನಿಗೆ ಪತ್ರ ಬರೆಯಬಹುದು, ಅರ್ಜಿ ನಾವೇ ಬರೆಯಬಹುದು, ಬಸ್ ಬೋರ್ಡ್ ಓದಬಹುದು, ರೇಶನ್ ಕಾರ್ಡ್ ಓದಿನೋಡಿಕೊಳ್ಳಬಹುದು........ ಹೀಗೇ ! ಅವರು ಖಂಡಿತಾ ನಮ್ಮಷ್ಟು ಅವಾಸ್ತವಿಕ ವಾಗಿ ಮಾತಾಡಲಾರರು !

ಪತ್ರಿಕೆಗಳ ಹೆಚ್ಚು ಭಾಗ, ಕಾರ್ಯಕ್ರಮದ ವರದಿಗಳು, ಸರಕಾರೀ ಅಧಿಕಾರಿಗಳು ಒಂದಷ್ಟು ಪ್ರತಿಷ್ಠಿತ ವ್ಯಕ್ತಿಗಳು ಅಲ್ಲಿ ಹೋದರು, ಇಲ್ಲಿ ಹೋದರು ಆಕ್ರಮಿಸಿಕೊಂಡಿರು ತ್ತದೆ. ಪ್ರೇರೇಪಿಸುವಂತಹ ವಸ್ತುಗಳು....ಮತ್ತೊಂದಷ್ಟು ಇರುತ್ತವೆ. ಆದರೆ, ಜನರನ್ನು ಮಹಿಳಾ ಪರವಾಗಿ ಯೋಚಿಸುವಂತೆ, ಪ್ರಶ್ನಿಸುವಂತೆ, ಮಾಡುವಂತಹ ಎಷ್ಟು ವಿಚಾರಗಳು ಇರುತ್ತವೆ ? 'ಇಲ್ಲ' ಅನ್ನುವಂತಿಲ್ಲ, ಹುಡುಕಿ ನೋಡಿದರೆ, ಚಿಕ್ಕ ಪುಟ್ಟ, ಪರಿಣಾಮಕಾರೀ ಅಂಶಗಳು ಕಂಡುಬರುತ್ತವೆ. ಆದರೆ ಆದರ ಪ್ರಮಾಣ ಕಡಿಮೆಯಾ ಗಿರುವುದೇ ಬೇಸರದ ಸಂಗತಿ. ಬಹುಶಃ ಇಲ್ಲಿ ಸೇರಿದ ಗುಂಪಿಗೆ ಇದೇ ಒಂದು ತೆರೆದಿಟ್ಟ ಖಾಲೀ ಪಟ, ದೊಡ್ಡ ಸವಾಲು. ಹುಚ್ಚುಹಿಡಿಸುವ ಸಿನಿಮಾಗಳು, ಟಿ. ವಿ.,

ಸಾಂಪ್ರದಾಯಿಕ ಮೌಲ್ಯಗಳನ್ನೇ ಹೊತ್ತು ಸಾರುವಂತಹ ಕಥೆ, ಕಾದಂಬರಿ, ಹಾಡುಗಳು, ಜಾಹೀರಾತುಗಳು ತುಂಬಿರುವ ಸಮಾಜದಲ್ಲಿ ನವಸಾಕ್ಷರ ಮಹಿಳೆಗೆ ಹತ್ತಿರದಿಂದ ತಟ್ಟಬಲ್ಲಂತಹ ಏನು ಸಾಮಗ್ರಿ ನಾವು ಕೊಡುತ್ತೇವೆ ? ಕೊಡಬಲ್ಲೆವು ? ಈ ನಿಟ್ಟಿನಲ್ಲಿ ಆದ ಪ್ರಯತ್ನ ಬಹಳ ಕಡಿಮೆ. ಜನಪರವಾಗಿ ಕೆಲಸ ಮಾಡುವ ಒಂದಷ್ಟು ಜನರು ಇಂತಹ ಕೃತಿಗಳನ್ನು–ರಚನೆಗಳನ್ನು ಜನರಿಗೆ ಕೊಟ್ಟಿದ್ದಾರೆ. ಒಮ್ಮೆ ಆಂದೋಲನದ ಪ್ರಕ್ರಿಯೆಯೊಳಗೆ ಸೇರಿಕೊಂಡ ಮಹಿಳೆಯರಿಗೂ ಅವರಿಗೇನು ಬೇಕು ಎಂಬುದೂ ಗೊತ್ತು ? (ಒಮ್ಮೆ ನವಸಾಕ್ಷರರ ಬರವಣಿಗೆ ಕಮ್ಮಟದಲ್ಲಿ ನಿರೀಕ್ಷೆಗೂ ಮೀರಿ ಸೀರೆ ತಯಾರಿಸುವುದು ಹೇಗೆ ?–ರೇಡಿಯೋ ಹೇಗೆ ಕೆಲಸ ಮಾಡುತ್ತದೆ ?–ತಿಳೀಬೇಕು ಎಂದು ಕೇಳಿದ್ದರು ಮಹಿಳೆಯರು. ಅಪರನ್ನೂ ಒಳಗೊಳ್ಳಿಸಿಕೊಂಡು, ಕೇಳಿಕೊಂಡು, ಚರ್ಚಿಸಿಕೊಂಡು, ಅವರಿಗೆ ಬೇಕೆನ್ನಿಸಿದಾಗ ಬೇಕಾದ ಮಾಹಿತಿಗಳನ್ನೊಳಗೊಂಡ ಸಾಮಗ್ರಿ ತಯಾರಿಸಬಲ್ಲೆವೇ ?)

ಹೊಸ ನಂಬಿಕೆಗಳನ್ನು, ಯೋಚನೆಗಳನ್ನು ಸೃಷ್ಟಿಸಬಲ್ಲೆವೇ ? ಒಬ್ಬ ಝಾನ್ಸಿ ರಾಣಿ, ಕಿತ್ತೂರು ಚೆನ್ನಮ್ಮ, ಇಂದಿರಾ ಗಾಂಧಿಗಳು ನಮಗೆ ಅತೀತರಾಗಿ ಹೋದರು. ಅವರು ಎಷ್ಟೇ ಆದರೂ ವ್ಯಕ್ತಿಗಳಾಗಿ ಬೆಳೆದವರು. ಸಮೂಹವಾಗಿ ಅಲ್ಲ. ಸಾಮೂಹಿಕ ಪ್ರಕ್ರಿಯೆಯಲ್ಲೂ ಅಲ್ಲ. ಅವರ ವಿಚಾರಗಳು ಮಹಿಳಾ ವರ್ಗಕ್ಕೆ ಹೆಚ್ಚೇನೂ ಮಾಡಲಾರವು. ಬೇಕು ಮಹಿಳೆಯರಿಗೀಗ, ಮಹಿಳೆಯರೊಳಗೇ ಹುಟ್ಟಿ–ಅಡಗಿಹೋಗುವ ಕಥೆಗಳು, ಅವರ ಬುದ್ಧಿವಂತಿಕೆಯ ಗುರುತುಗಳು, ಜಾಣ್ಮೆಯಿಂದ ನಿಭಾಯಿಸಿದ ಪರಿಸ್ಥಿತಿಗಳು, ಅವರ ಆತ್ಮ ಸಮ್ಮಾನವನ್ನು ಎತ್ತಿ ಹಿಡಿಯಬಲ್ಲ ಘಟನೆಗಳು, ಸಮಾಜಕ್ಕೆ ಕೊಟ್ಟ ಕೊಡುಗೆಗಳ ದಾಖಲೆಗಳು, ಅಳಿಸಿಹಾಕಿದ ಅವಳ ಇತಿಹಾಸದ ಹೆಜ್ಜೆಗಳು....! ಕೊಡಬಲ್ಲೆವೇ ನಾವಿದನ್ನು ? ನಮಗ ಭಯವಾಗುತ್ತದೆ ! ನಮ್ಮ ಅಸ್ತಿತ್ವವನ್ನೇ ಮೀರಿ ಅವರು ಬೆಳೆಯುವ ಬಗ್ಗೆ ನಮಗೆ ಭಯವಾಗುತ್ತದ ! ಅದಕ್ಕಾಗಿ ನಾವು ಆಂದೋಲನ ದಟ್ಟ ಅರಣ್ಯದಂತೆ (ವೈಲ್ಡ್ ಫಾರೆಸ್ಟ್) ಸೊಂಪಾಗಿ ಚಿಗುರುತ್ತಿರುವಂತೆಯೇ ಅದನ್ನು ನಮಗೆ ಬೇಕಾದ ಆಕೃತಿಗೆ. ಶಿಸ್ತಿಗೆ, ಪಟ್ಟಣದ ಪಾರ್ಕುಗಳಲ್ಲಿ ಬೆಳೆದು ನಿಲ್ಲಿಸುವ ಅಲಂಕಾರಿಕ ವೃಕ್ಷಗಳಂತೆ ಕತ್ತರಿಸಿ ಕೊಳ್ಳುತ್ತೇವೆ. ನಾವು ಕಾಡು ಕಡಿದು ಅಲ್ಲಿ ಕ್ರೋಟನ್ ಬೆಳೆಯುವ ಮಂದಿ ಅಲ್ಲವೇ ? ಆಂದೋಲನ ಬೆಳೆದು ತನ್ನದೇ ಸ್ವರೂಪ ಪಡೆಯುವಷ್ಟು ಕಾಯುವ ವ್ಯವಧಾನ ನಮ್ಮಲ್ಲಿದೆಯೇ ? ಅದಕ್ಕಾಗಿ ನಾವು ಸಾಕ್ಷರ ಮಹಿಳೆ ಕುಟುಂಬ ಯೋಜನೆ ಮಾಡಿಸಿಕೊಳ್ಳುತ್ತಾಳೆ, ಮಾಡಿಸಿಕೊಳ್ಳಬೇಕು ಎಂದು ಪರೋಕ್ಷವಾಗಿ ತೀರ್ಮಾನ ಕೊಡುತ್ತೇವೆ.

ಪ್ರಜ್ಞಾವಂತ ಮಹಿಳಾ ಗುಂಪೊಂದಕ್ಕೆ ತಮ್ಮ ಬೆಳವಣಿಗೆಗೆ ಏನು ಬೇಕು ಎಂದು ನಿರ್ಧರಿಸುವುದು ಕೂಡಾ ಗೊತ್ತಿದೆ. ಯಾವುದಕ್ಕೆ ಮೊದಲ ಪ್ರಾಶಸ್ತ್ಯ ಕೊಡಬೇಕು ಅನ್ನುವುದೂ ಗೊತ್ತಿದೆ. ಅವರು ಬದಲಾವಣೆಯ ನಿಟ್ಟಿನಲ್ಲಿ ; ಹೋರಾಟದ ದಾರಿಯಲ್ಲಿ ಮೊದಲ ಪ್ರಾಶಸ್ತ್ಯ ಕುಟುಂಬ ಯೋಜನೆಗೆ ಕೊಡುತ್ತಾರೋ, ಗಂಡ ಹೊಡೆಯುವುದಕ್ಕೆ ಕೊಡುತ್ತಾರೋ, ಕುಡಿತಕ್ಕೆ ಕೊಡುತ್ತಾರೋ, ಅಥವಾ ಇನ್ನೇನಕ್ಕೆ ಕೊಡುತ್ತಾರೋ ಅದು ನಮ್ಮ ತರ್ಕಕ್ಕೆ ನಿಲುಕುವಂತಹುದಲ್ಲ. ಇತರರು ಅದನ್ನು ಹೇಳಿಕೊಡಬೇಕಾಗಿಲ್ಲ, ಹೇಳಿ ಕೊಟ್ಟರೂ ಅವರದನ್ನು ಲೆಕ್ಕಿಸುವುದಿಲ್ಲ.

ಪ್ರಸ್ತುತ ಸಮಾಜಕ್ಕೆ, ಮಹಿಳಾವಾದ ಒಂದು ಅನಿವಾರ್ಯ ಪರಿಹಾರ ! ಸ್ಪರ್ಧಾತ್ಮಕವಾಗಿ ಬೆಳೆಯುತ್ತಿರುವ ಸಾಮಾಜಿಕ ಪರಿಸರಕ್ಕೆ, ಸಹಕಾರಾತ್ಮಕ ಮನೋಭಾವ ತರುವ ಶಕ್ತಿ ಇರುವುದು ಮಹಿಳಾವಾದೀ ಪ್ರಜ್ಞೆಗೆ ಮಾತ್ರ. ಮಹಿಳೆಯರು ಪುರುಷ ಪ್ರವೃತ್ತಿಯನ್ನೇ ಬಿಡುಗಡೆಯ ಸಂಕೇತವೆಂದು ತಿಳಿದು ಅನುಸರಿಸದೆ, ಮಹಿಳಾ ಸಂವೇದನೆಗಳನ್ನು', ಪ್ರವೃತ್ತಿಗಳನ್ನು ಸ ಕಾ ರಾ ತ್ಮ ಕ ವಾ ಗಿ ದೃಢಪಡಿಸಿಕೊಳ್ಳಬೇಕಾಗಿದೆ. ಅಂತಯೇ, ಪುರುಷರೂ ತಮ್ಮೊಳಗಿನ ಮಹಿಳಾ ಪ್ರವೃತ್ತಿಗಳನ್ನು ಸಂವೇದನೆಗಳನ್ನು ಗುರುತಿಸಿ ಅನುಭವಿಸುವುದನ್ನು, ಅದನ್ನು ಖುಷಿಯಿಂದ ಅಭಿವ್ಯಕ್ತಿಸುವುದನ್ನು ಕಲಿತರೆ–ಬದಲಾವಣೆ ಸುಲಭ ಸಾಧ್ಯ. ಒಂದು ಮೌನ ಕ್ರಾಂತಿಯಾಗಲು ಸಾಧ್ಯ. ಶ್ರೀಲತಾ ಬಾಟ್ಲಿವಾಲಾರ ಮಾತಿನಲ್ಲಿ ಹೇಳೋದಾದರೆ– "ಸಶಕ್ತತೆಯ ಪ್ರಕ್ರಿಯೆ ಮಾನಸಿಕವಾಗಿ ಪ್ರಾರಂಭವಾಗುತ್ತದೆ. ಪುರುಷ ಪ್ರಧಾನ ವ್ಯವಸ್ಥೆಗೆ ಸದಾ ತನ್ನನ್ನು ಒಪ್ಪಿಸಿಕೊಂಡೇ ಬೆಳೆದ ಹೆಂಗಸರು ಮೊದಲು ಇದನ್ನು ಸಡಲಿಸಿಕೊಳ್ಳಬೇಕಾಗುತ್ತದೆ. ಗಂಡು–ಹೆಣ್ಣುಗಳಲ್ಲಿ ಸಹಜವಾದ ಕೆಲವು ವ್ಯತ್ಯಾಸಗಳಿವೆ. ಆದರೆ, ಮತ್ತೊಂದಷ್ಟು ಅಗಾಧವಾದ ವ್ಯತ್ಯಾಸಗಳು–

ಅಧಿಕಾರ, ಸ್ವಂತ ನಿರ್ಧಾರ ತೆಗೆದುಕೊಳ್ಳುವಿಕೆ, ಸಂಪನ್ಮೂಲಗಳ ಮೇಲೆ ಹಿಡಿತ–ಗಳು ಸಾಮಾಜಿಕವಾಗಿ ಸೃಷ್ಟಿಯದಂತಹುದು ........ ಹೇರಲ್ಪಟ್ಟಿರುವಂತಹದು. ಜೊತೆಗೇ–ಗಂಡು–ಹೆಣ್ಣಿನ ಪ್ರವೃತ್ತಿಗಳಿಗೆ ಅಂಟಿಕೊಂಡ, ಮೇಲು-ಕೀಳು ಸ್ತರಗಳು, ಇದರ ಬೇರನ್ನು ಹಿಡಿದುಅಲ್ಲಾಡಿಸುವಲ್ಲಿಂದ ಬದಲಾವಣೆಯ ಪ್ರಕ್ರಿಯೆ ಆರಂಭ ವಾಗುತ್ತದೆ. ಕೀಳರಿಮೆಯಿಂದ ಮೇಲೆ ಏರಲು ಸಾಧ್ಯವಾಗುತ್ತದೆ. ತಮ್ಮೊಳಗಿನಶಕ್ತಿ, ಕೌಶಲ್ಯ, ಬುದ್ಧಿವಂತಿಕೆ, ಜ್ಞಾನವನ್ನು ಗುರುತಿಸಿಕೊಳ್ಳುತ್ತಾ–ಸಂಪನ್ಮೂಲಗಳ ಮೇಲೆ ಹಿಡಿತ ಸಿಗತೊಡಗುತ್ತದೆ. ಅವರ ಬದುಕಿನ ಮಹತ್ವ–ಕುಟುಂಬಕ್ಕೂ ಮೀರಿ ಸಮುದಾಯ–ಜಗತ್ತೊಳಗೆ ಇದೆ ಎಂಬುದು ಅವರ ವ್ಯಕ್ತಿತ್ವವನ್ನು ವಿವರಿಸುತ್ತದೆ. ತಮ್ಮ ಅಸ್ತಿತ್ವದ ಅಭಿವ್ಯಕ್ತಿಗೆ–ಸ್ಥಾಪನೆಗೆ ತೊಡಗುತ್ತಾರೆ. ಗುಂಪಾಗಿ ಗುರುತಿಸಿಕೊಳ್ಳುತ್ತಾರೆ...."

ಇಲ್ಲೇ....ಬೆಳವಣಿಗೆಯ ಬೀಜಗಳು ಅಡಗಿವೆ. ಇಷ್ಟವಿದ್ದರೆ ನಾವೂ–ನೀವೂ ಬೇರೆ ಬೇರೆ ರೂಪದಲ್ಲಿ ಇಂತಹ ಸೇರುವಿಕೆಯನ್ನು ಸಾಕ್ಷರತೆಯ ಹೆಸರಿನಲ್ಲೋ ಬೇರಾವುದರ ಹೆಸರಿನಲ್ಲೋ ಮಾಡಲು ಸಾಧ್ಯವಾದರೆ, ಇದೇ ಬೆಳೆಯಬೇಕು, ಅದೇ ಬೆಳೆಯಬೇಕು–ಎಂಬ ಹಟ ತೊಡದೇ ಒಂದಷ್ಟು ಬದಲಾವಣೆಯ ಬೀಜಗಳನ್ನು ಬಿತ್ತುವ ಕೆಲಸ ಮಾಡಿದರೆ, ಪ್ರಕ್ರಿಯೆಯಲ್ಲಿ ಬೆರೆತು ಹೋದೇವು–ಬದಲಾವಣೆಯಲ್ಲಿ ಸೇರಿಕೊಂಡೇವು....



---

# ಓದುಗರ ವಿಭಾಗ....

ಮಾನಸದ ಮೂಲಕ ತಾವು ಮಾಡುತ್ತಿರುವ ಕಾರ್ಯ ಶ್ಲಾಘನೀಯ. ಪತ್ರಿಕೆಯಲ್ಲಿ ಸತ್ಯಕತೆಗಳನ್ನು ಪ್ರಕಟಿಸಿ. ಅದರಿಂದ ನೊಂದವರ ಕತೆಯಿಂದ ಬೇರೆಯವರು ತಿಳುವಳಿಕೆ ಪಡೆದುಕೊಳ್ಳಬಹುದು. ಮಾನಸ ನಮ್ಮೆಲ್ಲರ, ಅಂದರೆ ಹೆಂಗಳೆಯರ ಮನಸಾಗಬಾರದೇಕೆ ?

—ಪದ್ಮಾ ವೆಂಕಟೇಶ್
ಕುಡುಗರ ಹಳ್ಳಿ, ಸಕಲೇಶಪುರ

ಸಂಪಾದಕೀಯಕ್ಕೆ ಆಯ್ದುಕೊಂಡ ವಿಷಯಗಳು ಸಕಾಲಿಕ ಹಾಗೂ ಬೆಲೆಬಾಳುವಂತಹವು. ಲೇಖನಗಳು, ಕವನಗಳು ಉತ್ತಮವಾಗಿದ್ದರೂ, ಮಾನಸ ಈ ನಿಟ್ಟನಲ್ಲಿ ಇನ್ನು ಬೆಳೆಯಬೇಕಷ್ಟೇ. ಮಹಿಳೆಯರನ್ನು ಬಡಿದೆಬ್ಬಿಸುವ ಸಮಯದಲ್ಲಿ ಸ್ತ್ರೀಯರನ್ನು ಪುರುಷರ ವಿರುದ್ಧ ಎತ್ತಿ ಕಟ್ಟುವುದರಲ್ಲಿ ಅರ್ಥವಿಲ್ಲ. ನಮಗೆ ಬೇಕಿರುವುದು ಗಂಡಸರು ಮತ್ತು ಹೆಂಗಸರು ಪರಸ್ಪರ ಗೌರವಿಸಿಕೊಳ್ಳುವಂತಾಗಬೇಕು. ಈ ನಿಟ್ಟಿನಲ್ಲಿ ಮಾನಸ ದುಡಿಯಲಿ.

—ಧನಂಜಯ ಕುಂಬ್ಳೆ
ಕಾಸರಗೋಡು,

ಮಹಿಳಾ ಶೋಷಣೆಯನ್ನು ಬೆಳಕಿಗೆ ತರುವ ನಿಮ್ಮ ಧ್ಯೇಯ ಸ್ವಾಗತಾರ್ಹ. ಲೇಖನಗಳು ಚೆನ್ನಾಗಿ ಮೂಡಿ ಬರುತ್ತಿವೆ. ಹೊಸ ಲೇಖಕಿಯರನ್ನು ಬೆಳಕಿಗೆ ತರುವ ನಿಮ್ಮ ಪ್ರಯತ್ನ ತುಂಬಾ ಮೆಚ್ಚಿಗೆಯಾಯಿತು.

—ಗೀತಾ ಹೆಗಡೆ
ವಜ್ರಳ್ಳಿ

1993ನೇ ವರ್ಷ ಮಾನಸದ ಅವಲೋಕನ ಓದಿದಾಗ, ಎಷ್ಟೇ ಆರ್ಥಿಕ ಮುಗ್ಗಟ್ಟನ್ನು ಎದುರಿಸಿದರೂ ಪತ್ರಿಕೆಯನ್ನು ನಿಯತಕಾಲಿಕವಾಗಿ ತರುವುದು ಶ್ಲಾಘನೀಯ.

—ಸಿದ್ಧರಾಮ ಎಸ್. ರೆಡ್ಡಿ
ಹಿರೇಬೇವನೂರು, ಇಂಡಿ

ಜಾಹೀರಾತುಗಳಿಂದ ಮುಕ್ತವಾದ ಮಾನಸ ಪತ್ರಿಕೆ ನಿಜವಾಗಲೂ ಮೆಚ್ಚುವಂತಿದೆ.

—ಲತಾ. ಕೆ., ಕಲ್ಕೆರೆ.

# ಪಿತೃ ಪ್ರಧಾನತೆ

● **ಕಮಲಾ ಭಾಸಿನ್**

**(ಹಿಂದಿನ ಸಂಚಿಕೆಯಿಂದ)**

**ಪ್ರ : ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಸ್ಥೆಗಳು ಪುರುಷರಿಂದ ನಿಯಂತ್ರಣಗೊಂಡಿವೆ ಎಂದು ಮೊದಲು ಹೇಳಿದಿರಲ್ಲ, ಅದನ್ನು ವಿವರಿಸುತ್ತೀರಾ ?**

**ಉ :** ಸಮಾಜದ ಮುಖ್ಯ ಸಂಸ್ಥೆಗಳ ವಿಶ್ಲೇಷಣೆಯಿಂದ ಅವೆಲ್ಲವೂ ಪಿತೃಪ್ರಧಾನ ಸ್ವಭಾವ ಹೊಂದಿರುತ್ತವೆ ಎಂಬುದು ಅರ್ಥವಾಗುತ್ತದೆ. ಕುಟುಂಬ, ಧರ್ಮ, ಕಾನೂನು- ಇವು ಪಿತೃಪ್ರಧಾನ ವ್ಯವಸ್ಥೆಯ ಹಾಗೂ ರಚನೆಯ ಕಂಬಗಳಾಗಿವೆ. ಹೀಗೆ ಚೆನ್ನಾಗಿ ನೇಯಲ್ಪಟ್ಟ ಹಾಗೂ ಬಲವಾಗಿ ಬೇರೂರಿದ ವ್ಯವಸ್ಥೆ ಪಿತೃ ಪ್ರಧಾನತೆಯನ್ನು ಅಜೇಯವಾಗಿಸಿದೆ. ಜೊತೆಗೆ ಇದು ತುಂಬಾ ಸಹಜವಾಗಿ ಕಾಣುವಂತೆ ಸಹ ಮಾಡಿದೆ. ಪಿತೃ ಪ್ರಧಾನದ ಪ್ರತಿಯೊಂದು ಸಂಸ್ಥೆಯನ್ನು ನಾವು ಪ್ರತ್ಯೇಕವಾಗಿ ವಿವರಿಸೋಣ.

## ೧ ಕುಟುಂಬ

ಕುಟುಂಬ ಸಮಾಜದ ಮೂಲಭೂತ ಅಂಗ. ಇದು ಪ್ರಭಾವಯುತ ಪಿತೃ ಪ್ರಾಧಾನ್ಯತೆ ಹೊಂದಿರತಕ್ಕಂತಹದು. ಇಲ್ಲಿ ಗಂಡು ಮನೆಯ ಮುಖ್ಯಸ್ಥನಾಗಿರುತ್ತಾನೆ. ಕುಟುಂಬದೊಳಗಡೆ ಅವನು ಮಹಿಳೆಯರ ಲೈಂಗಿಕತೆ, ಶ್ರಮ ಅಥವಾ ಉತ್ಪಾದನೆ, ಮರು ಉತ್ಪಾದನೆ (reproduction) ಮತ್ತು ಚಲನ-ವಲನಗಳನ್ನು ನಿಯಂತ್ರಿಸುತ್ತಾನೆ. ಇಲ್ಲಿರುವ ಶ್ರೇಣೀಕೃತ ವ್ಯವಸ್ಥೆಯಲ್ಲಿ ಪುರುಷ ಹಿರಿಮೆಯುಳ್ಳವನು ಹಾಗೂ ಪ್ರಾಧಾನ್ಯತೆ ಇರುವವನು. ಹೆಂಗಸು ಕೀಳರಿಮೆಯವಳು, ಹಾಗೂ ಕೆಳಗಿನವಳು. ಮುಂದಿನ ಪೀಳಿಗೆಯನ್ನು ಪಿತೃ ಪ್ರಧಾನ ಮೌಲ್ಯಗಳಲ್ಲಿ ಸಾಮಾಜೀಕರಣಗೊಳಿಸುವಲ್ಲಿಯೂ ಸಹ ಕುಟುಂಬ ಮುಖ್ಯವಾದುದು. ಕುಟುಂಬದೊಳಗಡೆಯೇ ನಾವು ಶ್ರೇಣೀಕೃತ ವ್ಯವಸ್ಥೆ, ಗುಲಾಮಗಿರಿ, ತಾರತಮ್ಯದ ಪ್ರಥಮ ಪಾಠಗಳನ್ನು ಕಲಿಯುವುದು. ಇಲ್ಲಿ ಹುಡುಗರು ಆತ್ಮ ಪ್ರತಿಷ್ಠಾಪನೆ, ಪ್ರಧಾನತೆ ನಿರೀಕ್ಷಿಸುವುದನ್ನು ಕಲಿತರೆ, ಹುಡುಗಿಯರು ಅಧೀನತೆ ಹಾಗೂ ಅಸಮಾನ ವರ್ತನೆಯನ್ನು ನಿರೀಕ್ಷಿಸುವುದನ್ನು ಕಲಿಯುತ್ತಾರೆ. ಭಿನ್ನ ಭಿನ್ನ ಕಟುಂಬಗಳಲ್ಲಿ ಪುರುಷರ ನಿಯಂತ್ರಣದ ಸ್ವರೂಪ ಬೇರೆ ಬೇರೆಯಾಗಿರಬಹುದಾದರೂ ನಿಯಂತ್ರಣ ಸಂಪೂರ್ಣವಾಗಿ ಇಲ್ಲವಾಗಿಲ್ಲ. **ಜರ್ಡಾ ಲರ್ನರ್** ಪ್ರಕಾರ ಪಿತೃ ಪ್ರಧಾನ ವ್ಯವಸ್ಥೆಯನ್ನು ಸೃಷ್ಟಿಸುವಲ್ಲಿ ಹಾಗೂ ಸಮಾಜದ ವ್ಯವಸ್ಥೆಯನ್ನು ಕಾಯುವಲ್ಲಿ ಕುಟುಂಬವು ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. **ಕುಟುಂಬವು ಪ್ರಭುತ್ವ (state) ವನ್ನು ಪ್ರತಿಬಿಂಬಿಸುವ ಜೊತೆಗೆ ಮಕ್ಕಳು ಇದನ್ನು ಅನುಕರಿಸುವಂತೆ ಶಿಕ್ಷಣ ನೀಡುವುದಷ್ಟೇ ಅಲ್ಲ, ಇದೂ ಕೂಡಾ ವ್ಯವಸ್ಥೆಯನ್ನು ಸೃಷ್ಟಿಸಿ ಜೊತೆಗೆ ಪ್ರಭುತ್ವವನ್ನು ಬಲಪಡಿಸುತ್ತದೆ.**

## ೨. ಧರ್ಮ

ಪುರುಷನ ಅಧಿಕಾರ ಪರಮಾಧಿಕಾರ ಎಂದು ವ್ಯಾಖ್ಯಾನಿಸುವ ಆಧುನಿಕ ಧರ್ಮಗಳೆಲ್ಲವೂ ಪಿತೃಪ್ರಧಾನವಾಗಿರತಕ್ಕಂತಹುಗಳು. ಇವು ಪಿತೃ ಪ್ರಧಾನ ವ್ಯವಸ್ಥೆಯನ್ನು ಅಸಮಾನ ಶಕ್ತಿಯ ವಿಧಿ ನಿರ್ಣಾಯಕಗಳು ಎನ್ನುವ ರೀತಿಯಲ್ಲಿ ನೀಡುತ್ತವೆ. ಧರ್ಮಗಳು ಸಾಂಸ್ಥಿಕ ಸ್ವರೂಪಗೊಳ್ಳುವ ಮೊದಲು ಇದ್ದ ಸ್ತ್ರೀತ್ಮಾಕತೆಯ ತತ್ವ ಕ್ರಮೇಣವಾಗಿ ದುರ್ಬಲಗೊಳಿಸಲ್ಪಟ್ಟಿದೆ, ದೇವತೆಗಳು ದೇವರುಗಳಿಂದ ಸ್ಥಾನಪಲ್ಲಟಗೊಂಡಿದ್ದಾರೆ. ಎಲ್ಲಾ ಪ್ರಮುಖ ಧರ್ಮಗಳೂ ಮೇಲ್ಜಾತಿಯ ಹಾಗೂ ಮೇಲ್ವರ್ಗದ ಪುರುಷರಿಂದ ಸೃಷ್ಟಿಸಲ್ಪಟ್ಟಿವೆ, ವ್ಯಾಖ್ಯಾನಿಸಲ್ಪಟ್ಟಿವೆ ಮತ್ತು ನಿಯಂತ್ರಣಗೊಂಡಿವೆ. ಅವರು ನೈತಿಕತೆ, ನಿಯಮಗಳು, ಸ್ವಭಾವ ಮತ್ತು ಕಾನೂನುಗಳ ರೂಪು-ರೇಖೆಗಳನ್ನೂ ಸಹ ಸ್ಪಷ್ಟ ಮಾಡಿ ಇಟ್ಟಿದ್ದಾರೆ. ಸ್ತ್ರೀ - ಪುರುಷರ ಕರ್ತವ್ಯ ಮತ್ತು ಹಕ್ಕುಗಳು, ಅವರ ನಡುವಿನ ಸಂಬಂಧವನ್ನು ಅವರು ರೂಪಿಸಿ ಇಟ್ಟಿದ್ದಾರೆ. ಪ್ರಭುತ್ವದ ಕಾರ್ಯ ನೀತಿಯನ್ನು ಪ್ರಭಾವಿಸುವ ಜೊತೆಗೆ ಹೆಚ್ಚು ಸಮಾಜದಲ್ಲಿ ಇವರು ಒಂದು ಮುಖ್ಯ ಚಿತ್ರಣವಾಗಿ ಮುಂದುವರೆದಿದ್ದಾರೆ. ದಕ್ಷಿಣ ಏಶಿಯಾದಲ್ಲಿ ಅವರ ಶಕ್ತಿ ಹಾಗೂ ಅವರ ಇರುವಿಕೆ ಗುರುತರವಾಗಿದೆ. ಉದಾಹರಣೆಗೆ,

ಭಾರತ ಒಂದು ಜಾತ್ಯಾತೀತ ರಾಷ್ಟ್ರವಾಗಿದ್ದಾಗ್ಯೂ ಸಹ ಒಬ್ಬ ವ್ಯಕ್ತಿಯ ವಿವಾಹ, ವಿಚ್ಛೇದನ, ಆಸ್ತಿಯ ಹಕ್ಕು, ಉತ್ತರಾಧಿಕಾರತ್ವ, ಕಾನೂನು ಬದ್ಧತೆ ಇವೆಲ್ಲವೂ ಅವನ ಅಥವಾ ಅವಳ ಧರ್ಮದಿಂದಲೇ ನಿರ್ಧರಿತವಾಗುತ್ತದೆ. ಹೀಗೆ ಎಲ್ಲಾ ಧರ್ಮಗಳೂ ಸ್ತ್ರೀಯರನ್ನು ಕೀಳರಿಮೆ ಯುಳ್ಳವರು, ಅಶುದ್ಧರು, ಪಾಪಿಷ್ಟರು ಎಂದು ಬಗೆಯುತ್ತದೆ, ಹೇಗೆ ಧರ್ಮಗಳು ನೈತಿಕತೆ ಹಾಗೂ ನಡತೆಯ ಇಬ್ಬಂದಿ ಅಳತೆಗೋಲುಗಳನ್ನು ಸೃಷ್ಟಿಸಿವೆ, ದಾರಿ ತಪ್ಪಿದ (deviant) ಹೆಂಗಸರ ವಿರುದ್ಧ ಹಿಂಸಾಚಾರ ಬಳಸುವುದನ್ನು ಹೇಗೆ ಧಾರ್ಮಿಕ ಕಾನೂನುಗಳು ನ್ಯಾಯಗೊಳಿಸುತ್ತವೆ, ಧಾರ್ಮಿಕ ನಿಯಮಗಳು ಮತ್ತು ಮೂಲಭೂತವಾದ ತತ್ವಗಳು ಹೇಗೆ ಅಸಮಾನ ಸಂಬಂಧಗಳನ್ನು ಅನುಮೋದಿಸಿವೆ ಮತ್ತು ನ್ಯಾಯಬದ್ಧಗೊಳಿಸಿವೆ ಎಂಬುದಕ್ಕೆ ಈಗ ಸಾಕಷ್ಟು ವಿವರಣೆ ಇದೆ.

### ೩. ಕಾನೂನು ವ್ಯವಸ್ಥೆ

ಬಹಳಷ್ಟು ದೇಶಗಳಲ್ಲಿ ಕಾನೂನು ವ್ಯವಸ್ಥೆ, ಪಿತೃ ಪ್ರಾಧಾನ್ಯತೆ ಹಾಗೂ ಬಂಡವಾಳಶಾಹಿತ್ವದ ಮುಖ ಹೊಂದಿರುತ್ತದೆ. ಅಂದರೆ ಇವು ಪುರುಷರನ್ನು ಹಾಗೂ ಆರ್ಥಿಕವಾಗಿ ಪ್ರಬಲವಾಗಿರುವ ವರ್ಗಗಳನ್ನು ಅನುಗ್ರಹಿಸುತ್ತವೆ. ಕುಟುಂಬ, ವಿವಾಹ, ಉತ್ತರಾಧಿ ಕಾರತ್ವಕ್ಕೆ ಸಂಬಂಧಪಟ್ಟ ಕಾನೂನುಗಳು ಆಸ್ತಿಯ ಮೇಲಿರುವ ಪಿತೃಪ್ರಾಧಾನ್ಯತೆಯ ನಿಯಂತ್ರಣದೊಂದಿಗೆ ನಿಕಟ ಸಂಬಂಧ ಹೊಂದಿವೆ. ದಕ್ಷಿಣ ಏಶಿಯಾದಲ್ಲಿ ಪ್ರತಿಯೊಂದು ಕಾನೂನು ವ್ಯವಸ್ಥೆಯೂ ಪುರುಷನನ್ನು ಮನೆಯ ಮುಖ್ಯಸ್ಥನನ್ನಾಗಿ, ಮಕ್ಕಳ ಸಹಜ ಪೋಷಕ ರನ್ನಾಗಿ, ಆಸ್ತಿಯ ಪ್ರಥಮ ಉತ್ತರಾಧಿಕಾರಿಯಾಗಿ ಪರಿಗಣಿಸುತ್ತವೆ. ನ್ಯಾಯ ತತ್ತ್ವಗಳು, ನ್ಯಾಯಾಂಗ ನ್ಯಾಯಾಧಿಕಾರಿಗಳು, ವಕೀಲರು ತಮ್ಮ ಬಹುತೇಕ ನಡುವಳಿಕೆಗಳಲ್ಲಿ, ಕಾನೂನಿನ ತಮ್ಮ ವ್ಯಾಖ್ಯಾನದಲ್ಲಿ ಸಾಮಾನ್ಯವಾಗಿ ಪಿತೃ ಪ್ರಾಧಾನ್ಯತೆ ಹೊಂದಿರುತ್ತವೆ.

### ೪. ಆರ್ಥಿಕ ವ್ಯವಸ್ಥೆ ಮತ್ತು ಆರ್ಥಿಕ ಸಂಸ್ಥೆಗಳು

ಪಿತೃ ಪ್ರಧಾನ ಆರ್ಥಿಕ ವ್ಯವಸ್ಥೆಯ ಒಳಗಡೆ ಪುರುಷರು ಆರ್ಥಿಕ ಸಂಸ್ಥೆಗಳ ನಿಯಂತ್ರಿಸುತ್ತಾರೆ, ಆಸ್ತಿ ಹೊಂದಿರುತ್ತಾರೆ, ಆರ್ಥಿಕ ಚಟುವಟಿಕೆಗಳನ್ನು ನಿರ್ದೇಶಿಸುತ್ತಾರೆ, ಭಿನ್ನ ಉತ್ಪಾದನಾ ಚಟುವಟಿಕೆಗಳ ಮೌಲ್ಯವನ್ನು ನಿರ್ಧರಿಸುತ್ತಾರೆ. ಸ್ತ್ರೀಯರಿಂದ ಮಾಡಲ್ಪಟ್ಟ ಬಹಳಷ್ಟು ಉತ್ಪಾದನಾ ಕೆಲಸ ಗುರುತಿಸ ಲ್ಪಡುವುದಿಲ್ಲ, ಅಥವಾ ಹಣ ಕೊಡಲ್ಪಡುವುದಿಲ್ಲ. ಮರಿಯಾ ಮೀಸ್ ಕರೆಯುವ 'ನೆರಳ ಕೆಲಸ' (shadow work) ದಿಂದ ಉಳಿತಾಯದ ಸೃಷ್ಟಿಯಲ್ಲಿ ಇರುವ ಮಹಿಳೆಯರ ಕೊಡುಗೆಯನ್ನು ಸಂಪೂರ್ಣವಾಗಿ ತಿರಸ್ಕರಿಸಲಾಗಿದೆ, ಮನೆಗೆಲಸದ ಮೌಲ್ಯೀಕರಣಗೊಂಡೇ ಇಲ್ಲ. ಜೊತೆಗೆ ಉತ್ಪಾದಕರಾಗಿ ಅಥವಾ ಮಕ್ಕಳ ಪಾಲಕರಾಗಿ ಹಾಗೂ ಶ್ರಮ ಶಕ್ತಿಯ ಹೆಂಗಸರ ಪಾತ್ರ ಆರ್ಥಿಕ ಕೊಡುಗೆಯಾಗಿ ಪರಿಗಣಿತವಾಗಿಲ್ಲ.

### ೫. 'ರಾಜಕೀಯ ವ್ಯವಸ್ಥೆಗಳು ಮತ್ತು ಸಂಸ್ಥೆಗಳು

ಸಮಾಜದ ಬಹುತೇಕ ರಾಜಕೀಯ ಸಂಸ್ಥೆಗಳು - ಹಳ್ಳಿಯ ಕೌನ್ಸಿಲ್‌ನಿಂದ ಹಿಡಿದು ಪಾರ್ಲಿಮೆಂಟಿನವರೆಗೆ ಎಲ್ಲಾ ಹಂತದಲ್ಲೂ ಪುರುಷರ ಪ್ರಧಾನ್ಯತೆ ಹೊಂದಿವೆ. ನಮ್ಮ ದೇಶಗಳ ಹಣೆಬರಹವನ್ನು ನಿರ್ಧರಿಸುವ ರಾಜ ಕೀಯ ಪಕ್ಷಗಳಲ್ಲಿ ಅಥವಾ ಸಂಸ್ಥೆಗಳಲ್ಲಿ ಕೆಲವೇ ಕೆಲವು ಮಂದಿ ಹೆಂಗಸರಿದ್ದಾರೆ. ಕೆಲವು ಮುಖ್ಯ ರಾಜಕೀಯ ವ್ಯಕ್ತಿಗಳ ನಿರತ ಸಂಪರ್ಕದಿಂದಾಗಿ ಯಾವಾಗ ಕೆಲವು ಮಹಿಳೆಯರು ರಾಜಕೀಯ ಅಧಿಕಾರ ವಹಿಸಿಕೊಳ್ಳು ತ್ತಾರೋ (ಸಿರಿಮಾವೋ ಬಂಡಾರ ನಾಯಕೆ, ಇಂದಿರಾ ಗಾಂಧಿ, ಬೆನಜೀರ್ ಭುಟ್ಟೋ, ಖಲೇದಾಜಿಯಾ)ಅವರು ಪುರುಷರಿಂದ ನಿರ್ದೇಶಿಸಲ್ಪಟ್ಟ ರಚನೆಗಳು ಹಾಗೂ ತತ್ವಗಳೊಡಗಡೆಯೇ ಕೆಲಸ ಮಾಡುತ್ತಾರೆ. ದಕ್ಷಿಣ ಏಷಿಯಾ ಇಡಿಯ ಪ್ರಪಂಚದಲ್ಲಿ ಬಹಳಷ್ಟು ಮಹಿಳೆ ಯರನ್ನು ರಾಜ್ಯದ ಮುಖ್ಯಾಧಿಕಾರಿಗಳನ್ನಾಗಿ ಹೊಂದಿ ರುವ ಒಂದೇ ಪ್ರದೇಶವಾಗಿದ್ದರೂ, ಪಾರ್ಲಿಮೆಂಟ್‌ನಲ್ಲಿ ಮಹಿಳೆಯರ ಶೇಕಡಾವಾರು ಸಂಖ್ಯೆ ಯಾವಾಗಲೂ ಮತ್ತು ಎಲ್ಲಿಯೂ ಹತ್ತು ಪರ್ಸೆಂಟ್‌ಗಿಂತ ಹೆಚ್ಚಾದುದಿಲ್ಲ.

### ೬. ಮಾಧ್ಯಮಗಳು

ವರ್ಗ ಹಾಗೂ ಲಿಂಗಾಧಾರಿತ ವಿಚಾರಧಾರೆಯನ್ನು ಪ್ರಚುರಗೊಳಿಸುವುದರಲ್ಲಿ ಮೇಲ್ಜಾತಿ ಹಾಗೂ ಮೇಲ್ವರ್ಗದ ಪುರುಷರ ಕೈಯಲ್ಲಿ ಮಾಧ್ಯಮಗಳು ಮುಖ್ಯ ಉಪಕರಣಗಳಾಗಿವೆ. ಚಲನಚಿತ್ರಗಳಿಂದ ಹಿಡಿದು ಟೆಲಿವಿಷನ್, ಮ್ಯಾಗ್‌ಜೈನ್‌ಗಳು, ದಿನಪತ್ರಿಕೆಗಳು,

ರೇಡಿಯೋಗಳು ಹೆಂಗಸರ ಚಿತ್ರಣವನ್ನು ಏಕರೂಪವಾಗಿ ಪಡಿಯಚ್ಚುಗೊಳಿಸಿವೆ ಮತ್ತು ವಿರೂಪಗೊಳಿಸಿವೆ. ಪುರುಷರ ಹಿರಿಮೆಯ ಹಾಗೂ ಸ್ತ್ರೀಯರ ಕೀಳರಿಮೆಯ ಬಗ್ಗೆಗಿನ ಸಂಧೇಶಗಳು ನಿರಂತರವಾಗಿ ಪುನರಾವರ್ತನೆಗೊಳ್ಳುತ್ತವೆ. ಮಹಿಳೆಯರ ಮೇಲಿನ ಹಿಂಸಾಚಾರ ವಿಶೇಷವಾಗಿ ಚಲನಚಿತ್ರಗಳಲ್ಲಿ ಅತಿರೇಖಕಕ್ಕೇರಿದೆ. ಇತರ ವಿಭಾಗಗಳಲ್ಲಿಯಂತೆ ಸ್ತ್ರೀಯರು ಮಾಧ್ಯಮಗಳ ಉದ್ಯೋಗದಲ್ಲಿ ಕಡಿಮೆ ಪ್ರಮಾಣದಲ್ಲಿದ್ದಾರೆ. ವರದಿಯಲ್ಲಿ, ಮುಖ್ಯ ಸುದ್ದಿಗಳಲ್ಲಿ ಜಾಹೀರಾತು ಮತ್ತು ಸಂದೇಶಗಳು ಲೈಂಗಿಕ ದೃಷ್ಟಿಕೋನ ಹೊಂದಿರುತ್ತವೆ.

**೭. ಶೈಕ್ಷಣಿಕ ಸಂಸ್ಥೆಗಳು ಮತ್ತು ಜ್ಞಾನದ ವ್ಯವಸ್ಥೆಗಳು**

ಯಾವಾಗಿನಿಂದ ಕಲಿಯುವಿಕೆ ಹಾಗೂ ಶಿಕ್ಷಣ ಔಪಚಾರಿಕವಾಗಿದೆಯೋ ಹಾಗೂ ಸಾಂಸ್ಥೀಕರಣಗೊಂಡಿದೆಯೋ ಆವಾಗಿನಿಂದ ಪುರುಷರು ತತ್ವಶಾಸ್ತ್ರ, ದೇವತಾ ಶಾಸ್ತ್ರ, ಕಾನೂನು, ಸಾಹಿತ್ಯ, ಕಲೆಗಳು, ವಿಜ್ಞಾನ ಎಲ್ಲಾ ಜ್ಞಾನ ಶಾಖೆಗಳ ಮೇಲೆ ತಮ್ಮ ನಿಯಂತ್ರಣ ಹೊಂದಿದ್ದಾರೆ. ಜ್ಞಾನದ ಸೃಷ್ಟಿಯ ಮೇಲಿರುವ ಪುರುಷರ ಪ್ರಾಬಲ್ಯದಿಂದಾಗಿ ಸ್ತ್ರೀಯರ ಜ್ಞಾನ ಹಾಗೂ ಅನುಭವಗಳು, ಅವರ ಪ್ರಾವೀಣ್ಯತೆಗಳು ಮತ್ತು ಆಶಯಗಳು ಮೂಲೆಗುಂಪಾಗಿವೆ.

ಬಹಳ ಸಂಸ್ಕೃತಿಗಳಲ್ಲಿ ಸ್ತ್ರೀಯರು ಲಿಪಿ ಬರಹಗಳನ್ನು ಅಭ್ಯಸಿಸುವುದನ್ನು ವ್ಯವಸ್ಥಿತವಾಗಿ ತಡೆಗಟ್ಟಲಾಗಿತ್ತು. ಈಗಲೂ ಸಹ-ಧಾರ್ಮಿಕ ಹಾಗೂ ನ್ಯಾಯ ಗ್ರಂಥಗಳನ್ನೂ ಪುನರ್ ವ್ಯಾಖ್ಯಾನಿಸುವುದನ್ನೂ ಮಹಿಳೆಯರಿಗೆ ಅನುವು ಮಾಡಿಲ್ಲವೆಂದೇ ಹೇಳಬಹುದು. ಜರ್ಡಾ ಲರ್ನರ್ ಹೇಳುತ್ತಾರೆ.

**ತಾಯಿ-ದೇವತೆಗಳು ಹಾಗೂ ಫಲವತ್ತತೆಯ ಶಕ್ತಿ-ಸ್ತ್ರೀಯರ ಶಕ್ತಿಯ ಮುಖ್ಯ ಸಂಕೇತಗಳನ್ನು ಪುರುಷರು ಹೇಗೆ ಬಳಸಿಕೊಂಡಿದ್ದಾರೆ ಹಾಗೂ ಹೇಗೆ ರೂಪಾಂತರಗೊಳಿಸಿದ್ದಾರೆ ಎಂಬುದನ್ನು ನಾವು ನೋಡಿದ್ದೇವೆ. ಪುರುಷವ್ಯತಿರಿಕ್ತ ವಾಸ್ತವಿಕ ರೂಪಕ ಪುರುಷರ ಸಂತಾನಶಕ್ತಿ ಮತ್ತು** ಪುನರ್ ವ್ಯಾಖ್ಯಾನಿಸಲ್ಪಟ್ಟ ಸಂಕುಚಿತ ಹಾಗೂ ಲೈಂಗಿಕ ಅವಲಂಬನೆಯ ರೀತಿಯ ಸ್ತ್ರೀಯ ಅಸ್ತಿತ್ವವನ್ನು ಆಧಾರವಾಗಿಟ್ಟುಕೊಂಡು ಪುರುಷರು ಹೇಗೆ ದೇವತಾ ಶಾಸ್ತ್ರವನ್ನು ಕಟ್ಟಿದ್ದಾರೆ ಎಂಬುದನ್ನು ನಾವು ನೋಡಿದ್ದೇವೆ. ಪುರುಷ ಮಾದರಿ. ಸ್ತ್ರೀ ಕುಲಟೆ, ಪುರುಷ ಪೂರ್ಣ ಹಾಗೂ ಶಕ್ತಿವಂತ, ಸ್ತ್ರೀಯು ಅಪೂರ್ಣಳು, ಕತ್ತರಿಸಲ್ಪಟ್ಟವಳು ಮತ್ತು ದೈಹಿಕತೆಯಲ್ಲಿ ಕೊರತೆ ಇರುವವಳು ಎಂಬುದನ್ನು ಹೇಗೆ **ಲಿಂಗ ಸಂಬಂಧಿತ ಈ ರೂಪಕ ತೋರಿಸುತ್ತದೆ ಎಂಬುದನ್ನೂ ನಾವು ನೋಡಿದ್ದೇವೆ. ಪುರುಷರು ಈ ಪ್ರಪಂಚವನ್ನು ತಮ್ಮದೇ ಆದ ವಾಕ್ಯಗಳಲ್ಲಿ ವಿವರಿಸಿದ್ದಾರೆ ಹಾಗೂ ಮುಖ್ಯವಾದ ಪ್ರಶ್ನೆಗಳನ್ನು ವ್ಯಾಖ್ಯಾನಿಸಿದ್ದಾರೆ, ಈ ಮೂಲಕ ತಮ್ಮನ್ನು ಇಡಿಯ ವಿಚಾರಧಾರೆಯ ಕೇಂದ್ರವಾಗಿ ಮಾಡಿಕೊಳ್ಳುವ ಸಲುವಾಗಿ ಈ ರೀತಿಯ ಸಂಕೇತಗಳನ್ನು ಕಟ್ಟಿದ್ದಾರೆ.**

ಹಲವು ಸ್ತ್ರೀವಾದಿಗಳ ಪ್ರಕಾರ ಭಿನ್ನತೆಗಳಿಂದ, ವ್ಯತ್ಯಾಸಗಳಿಂದ, ವಿರೋಧಗಳಿಂದ ಹಾಗೂ ದ್ವಂದ್ವಗಳಿಂದ, ಪಿತೃಪ್ರಾಧಾನ್ಯತೆಯ ಆಲೋಚನೆ ಹಾಗೂ ಜ್ಞಾನಗಳು ಗುಣ ವಿವರಣೆ ಪಡೆದಿವೆ. ಬುದ್ಧಿ/ವಸ್ತುಸ್ಥಿತಿಯ ವಿರೋಧಿಸುವ, ಆತ್ಮ-ಇತರರನ್ನು, ಕಾರಣ-ಭಾವನಾತ್ಮಕತೆಯನ್ನು, ಶೋಧಿಸುವವನನ್ನು-ಶೋಧನೆಯ ಉದ್ದೇಶದೊಂದಿಗೆ ಪಿತೃಪ್ರಾಧಾನ್ಯತೆ ವಿರೋಧಿಸುತ್ತದೆ ಎಂಬುದು ಇವರ ಹೇಳಿಕೆಯಾಗಿದೆ. ಈ ಎಲ್ಲಾ ಬಗೆಯ ವಿರೋಧಗಳಲ್ಲೂ ಸಹ ಒಂದು ಭಾಗ ಇನ್ನೊಂದು ಭಾಗಕ್ಕಿಂತ ಹೆಚ್ಚು ಎಂದು ಮೌಲ್ಯೀಕರಣಗೊಳಿಸಲಾಗಿದೆ. ಸಂಕುಚಿತತೆಯಲ್ಲಿ ಪ್ರತ್ಯೇಕೀಕರಿಸಲ್ಪಟ್ಟ ಹಾಗೂ ಚೂರು ಚೂರಾಗಲ್ಪಡುವಂತಹ ವಿಶೇಷ ಪರಿಣಿತಿಯನ್ನು ಪಿತೃ ಪ್ರಧಾನ ಜ್ಞಾನ ವ್ಯವಸ್ಥೆಯು ಒತ್ತು ನೀಡುತ್ತದೆ. ಇಂದ್ರಿಯ ಗೋಚರವಾದ ಪರಿಪೂರ್ಣತೆಯನ್ನು ನೋಡುವಲ್ಲಿ ಇದು ಅಸಮರ್ಥವಾಗಿವೆ.

ಪುರುಷರ ಪ್ರಾಧಾನ್ಯತೆ ಹೊಂದಿದ ಶಿಕ್ಷಣ ಮತ್ತು ಜ್ಞಾನ ಪಿತೃಪ್ರಧಾನ ವಿಚಾರಧಾರೆಯನ್ನು ಸೃಷ್ಟಿಸಿವೆ ಹಾಗೂ ಮುಂದುವರಿಸಿವೆ. ಇದನ್ನು ಸಿಲ್ವಿಯಾ ವಾಲ್ಬೈ **'ಲಿಂಗ ಭಿನ್ನತೆಯ ವಸ್ತುನಿಷ್ಠತೆಯ ಆಕಾರಗಳು, ವಿವಿಧ ಬಗೆಗಳು'** ಎಂದು ಕರೆಯುತ್ತಾಳೆ. **ಪುರುಷತೆ ಹಾಗೂ ಸ್ತ್ರೀಯಾತ್ಮಕತೆಯು ಭಿನ್ನ ಸ್ಥಿತಿಗೆ ಅನುಸರಿಸಿರುವುದರಿಂದ ಪುರುಷರು, ಸ್ತ್ರೀಯರು ಭಿನ್ನವಾಗಿ ವರ್ತಿಸುತ್ತಾರೆ, ಯೋಚಿಸುತ್ತಾರೆ, ಆಶಿಸುತ್ತಾರೆ.**

# ಮನೆ

ಬೆವರು ಹನಿಗಳ
ಜೋಡಿಸಿ
ಮನೆ ಮಾಡಿದ್ದೆ
ಅನುಮಾನ
ಅಪನಂಬಿಕೆಗಳ
ಮಾರುದ್ದ ದೂರದಲಿ
ದ್ವೇಷ,
ಅಸೂಯೆಗಳ
ಬೇಲಿಯಾಚೆಗಿರಿಸಿ
ಹಣ,
ಅಂತಸ್ತು
ಬಾಗಿಲಿಗಿರಿಸಿ
ಮನೆ ಮಾಡಿದ್ದೆ
ಸತ್ಯ,
ಸಹನೆ
ತಳಪಾಯವಾಗಲೆಂದು
ತಿಣುಕಾಡಿದ್ದೆ
ಪ್ರೀತಿ,
ವಿಶ್ವಾಸಗಳ
ಗೋಡೆಯಾಗಿರೆಂದ್ದು
ಬೇಡಿಕೊಂಡಿದ್ದೆ
ಕನಸುಗಳಿಗೆ
ಬಣ್ಣ ಬಳಿಯಲು ಹೇಳಿದ್ದೆ
ಕಾಣದ ದೇವನಿಗೆ
ನಂಬಿಕೆಯ
ದೀಪ ಹಚ್ಚಿದ್ದೆ

ಏನಾಯಿತೋ ?
ಹದ್ದುಗಳು ಹಾರಾಡಿವೆ
ಹಾವು, ಚೇಳುಗಳು
ಮನೆಯೊಳಗೆ
ಹರಿದಾಡಿವೆ
ಇಲಿ, ಹೆಗ್ಗಣಗಳು
ನೆಲ ಕೊರೆದಿವೆ
ಈಗ,
ಮನೆ ಅವಶೇಷ
ಬೆವರು ಹನಿಗಳ
ಹುಡುಕಿದರೆ
ತಣ್ಣನೆಯ
ಮೈಯೊಳಗೆ
ಕಳೆದು ಹೋಗಿವೆ
ನಿಮಗೆ
ಕಂಡರೆ
ಕೊಂಚಕೊಡಿ
ಮನೆಯೊಂದು
ಬೇಕು
ನನಗೆ
ಕೊನೆಯಾಗುವ ಮೊದಲು

● ಸರಸ್ವತಿ, ದು.

## ಓದುಗರ ಗಮನಕ್ಕೆ

- 'ಮಾನಸ' ಸಂಪರ್ಕ ವಿಳಾಸದಲ್ಲಿ ಸಂಪೂರ್ಣ ನೆಲೆಯೂರಲು ಇನ್ನೂ ಸ್ವಲ್ಪ ಸಮಯ ಬೇಕಾಗಿರುವುದರಿಂದ, ಅಂತಿಮವಾಗಿ ತಿಳಿಸುವವರೆಗೂ ದಯವಿಟ್ಟು ಎಂ. ಒ. ಚೆಕ್ಕುಗಳನ್ನು ಮತ್ತು ಡ್ರಾಫ್ಟ್‌ಗಳನ್ನು **ಕಾಡುಗೋಡಿಯ** ವಿಳಾಸಕ್ಕೆ ಕಳಿಸಬೇಕೆಂದು ಕೇಳಿಕೊಳ್ಳುತ್ತೇವೆ.

- 'ಮಾನಸ'ವನ್ನು ಸಂಪರ್ಕಿಸಬಯಸುವವರಿಗಾಗಿ ಇನ್ನು ಮುಂದೆ ತಿಂಗಳ ಪ್ರತಿ ಎರಡನೇ ಶನಿವಾರ ಮತ್ತು ಕೊನೆಯ ದಿನದಂದು 'ಸಂಪರ್ಕ ವಿಳಾಸ'ವೆಂದು ಸೂಚಿಸಿರುವ ಕಛೇರಿಯು ಮಧ್ಯಾಹ್ನ 2 ಗಂಟೆಯಿಂದ ಸಂಜೆ 5 ಗಂಟೆಯವರೆಗೂ ತೆರೆದಿರುತ್ತದೆ. 'ಮಾನಸ' ಬಳಗದ ಯಾರಾದರೂ ಅಲ್ಲಿ ಕಾಣಸಿಗುತ್ತೇವೆ. ಈ ದಿನ-ಸಮಯಗಳಲ್ಲಿ ನಿಮಗೆ ಸ್ವಾಗತವಿದೆ.

**–ಸಂಪಾದಕೀಯ ಮಂಡಳಿ**

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

BOOK-POST

C.G. MANJULA
9, 3rd Cross
Markham Road
Ashok Nagar
BANGALORE- 560 025.




ವಿಳಾಸ :
" ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067